# ಕರ್ನಾಟಕದ ಕಲಾವಿದರು

(೧೬ ಕಲಾವಿದರ ಪರಿಚಯ)

ಅ. ನ. ಕೃಷ್ಣರಾಯ

1946

ವಿಶ್ವವಾಣಿ ಪ್ರಕಟನ ಮಂದಿರ
"ಅನ್ನಪೂರ್ಣ" ವಿಶ್ವೇಶ್ವರಪುರಂ
ಬೆಂಗಳೂರು ನಗರ

೧೮೬ ಪುಟಗಳು]    ಬೆಲೆ. ರೂ ೩ ಆ ೮    [ಚಿತ್ರಗಳು. ೩೯

ಮಾರಾಟಗಾರರು

ಸತ್ಯಶೋಧನ ಪುಸ್ತಕ ಭಂಡಾರ

ಕೋಟೆ, ಬೆಂಗಳೂರು.

ಮುದ್ರಕರು

ವಿ. ರಾಮಕೃಷ್ಣ, ರಾಮಕೃಷ್ಣ ಅಂಡ್ ಕೋ, ಪ್ರೆಸ್

ಕೋಟೆ, ಬೆಂಗಳೂರು.

ರಕ್ಷಾಪುಟ, ಚಿತ್ರಗಳ ಮುದ್ರಕರು

ಎಂ. ಎಸ್. ಚಿಂತಾಮಣಿ, ಈಸ್ಟರ್ನ್ ಪ್ರೆಸ್,

ಬೆಂಗಳೂರು.

# ಮುನ್ನುಡಿ

ಒಂದು ದೇಶದ ಸಂಸ್ಕೃತಿಯನ್ನು ಅಳೆಯುವ ಮಾನದಂಡ ಕೇವಲ ಅದರ ರಾಜಕೀಯ ಪ್ರಗತಿಯಲ್ಲ. ಸಾಹಿತ್ಯ, ಕಲೆಗಳು ಸಹಜವಾಗಿ ಪ್ರಧಾನ ಸ್ಥಾನವನ್ನು ಅಲಂಕರಿಸಬೇಕು. ಐರ್ಲೆಂಡ್, ರಷ್ಯಾ ದೇಶಗಳಲ್ಲಿ ಸಾಹಿತ್ಯ, ಕಲೆಗಳ ಉತ್ಕರ್ಷಕ್ಕಾಗಿ ನಡೆದಿರುವ ಪ್ರಯತ್ನ, ಅವುಗಳನ್ನು ಜನಸಾಮಾನ್ಯದ ಸೊತ್ತನ್ನಾಗಿ ಮಾಡುವ ಸಾಹಸ ಅನುಕರಣೀಯವಾಗಿವೆ. ಸ್ವಸಂಸ್ಕೃತಿಯ ಪರಂಪರೆಯನ್ನು ನೀಗಿಕೊಂಡು, ಆಮದಾದ ಸಂಸ್ಕೃತಿಯನ್ನು ಜೀರ್ಣಿಸಿಕೊಳ್ಳಲಾರದೆ ತೊಳಲಾಡುತ್ತಿರುವ ಭಾರತೀಯರಾದ ನಾವು ಇದರ ಮಹತ್ವವನ್ನರಿಯದಿರುವುದು ಆಶ್ಚರಿಯಲ್ಲ.

ಈ ಎರಡು ದಶಕಗಳಲ್ಲಿ ಭಾರತದಲ್ಲಿ ಸಾಂಸ್ಕೃತಿಕ ಉತ್ಕ್ರಾಂತಿಗಾಗಿ ಕೆಲವು ಪ್ರಯತ್ನಗಳು ನಡೆದಿವೆ. ಜಪಾನ್, ತುರ್ಕಿ ದೇಶಗಳನ್ನು ಆದರ್ಶವನ್ನಾಗಿಟ್ಟು ನಮ್ಮ ಬಾಳು ಬದುಕನ್ನು ಸಂಪೂರ್ಣವಾಗಿ ಪಾಶ್ಚಿಮಾತ್ಯ ಸಂಸ್ಕೃತಿಮಯ ಮಾಡಬೇಕೆಂದು ಪ್ರಯತ್ನಿಸುವ ಆಂಗ್ಲಾಭಿಮಾನಿಗಳ ತಂಡ ಒಂದು ಕಡೆ; ಭಾರತೀಯ ಸಂಸ್ಕೃತಿ ಸರ್ವಾಂಗ ಪರಿಪೂರ್ಣವಾದುದು—ಆದಷ್ಟು ಹಿಂದಿನ ರೀತಿನೀತಿಗಳನ್ನು ಆಚರಣೆಯಲ್ಲಿ ತರುವ ಎಂದು ಪುರಾಣಯುಗಗಳಿಗೆ ಒಯ್ಯಲೆತ್ನಿಸುವ ತಂಡ ಇನ್ನೊಂದು ಕಡೆ. ಒಂದು ತಂಡಕ್ಕೆ ಬೇಕು ಬರೀ ಷೇಕ್ಸ್‌ಪಿಯರ್, ವಿನ್‌ಸ್ಟನ್ ಚರ್ಚಿಲ್; ಇನ್ನೊಂದು ತಂಡಕ್ಕೆ ಬೇಕು ಬರೀ ರಾಮಾಯಣ, ರಮಣ ಮಹರ್ಷಿ.

ಆದರೆ ವರ್ತಮಾನ ಭಾರತದ ಸ್ಥಿತಿಗತಿಯನ್ನು, ನಿರೀಕ್ಷಣೆ ಅವಶ್ಯಕತೆಗಳನ್ನು ಗಮನಿಸಿದರೆ ಎರಡೂ ತಪ್ಪುಹಾದಿಗಳು. ಹಟದಿಂದ ಜೋನ್ಸ್ ಜಯತಿಲಕನಾಗುವುದಿಲ್ಲ—ಹಾಗೇ ಮರಿಯಪ್ಪ ಮೈಖೇಲ್ ಆಗುವುದಿಲ್ಲ. ಒಂದು ಸಂಸ್ಕೃತಿ ವ್ಯಕ್ತಿಯಲ್ಲಿ ಆವಿರ್ಭೂತವಾಗಿರುತ್ತದೆ. ಅವನ ಒಳಗಣ್ಣು ಅದರ ಅಂತರಂಗವನ್ನರಿತಿರುತ್ತದೆ. ಈ ಪರಿಜ್ಞಾನ ದೇಶ, ಕಾಲ, ಧರ್ಮ ಜನ್ಮಗಳನ್ನು ಮೀರಿದ್ದು. ಪಂಡಿತ ಜವಹಿರಲಾಲ ನೆಹ್ರೂ ಅವರಂತೆ ಪಾಶ್ಚಾತ್ಯ ಸಂಸ್ಕೃತಿಯ ತಿರುಳನ್ನರಿತಿರುವವರು ಆಂಗ್ಲರಲ್ಲಿಯೇ ವಿರಳ;

ರೊಮೇ ರೋಲಾ ಅವರಂತೆ ಭಾರತೀಯ ಸಂಸ್ಕೃತಿಯ ರಹಸ್ಯವನ್ನರಿತಿದ್ದವರು ಭಾರತೀಯರಲ್ಲಿಯೂ ದೊರೆಯಲಾರರು.

ಸಂಸ್ಕೃತಿಯನ್ನೂ ಇಂದು ನಾವು ರಾಜಕೀಯದ ಕಣ್ಣುಗಳಿಂದ ನೋಡುತ್ತಿದ್ದೇವೆ. ಪಾಕಿಸ್ತಾನ ಸಮಸ್ಯೆ ಆರಂಭವಾದ ಮೇಲೆ ಮುಸಲ್ಮಾನ ಗವಯ್‌ಗಳನ್ನು ಕೇಳುವುದಿಲ್ಲವೆಂದು ಶಪಥಮಾಡಿರುವ ಹಿಂದುಗಳಿದ್ದಾರೆ. ಸಾವರ್ಕಾರರವರ ಭಾಷಣಗಳನ್ನು ಕೇಳಿ ಹಿಂದೂ ಧರ್ಮ, ಕಲೆ, ಸಾಹಿತ್ಯಗಳೆಲ್ಲವನ್ನೂ ಮುಟ್ಟುವುದಿಲ್ಲವೆಂದು ಪ್ರಮಾಣಮಾಡಿರುವ ಮುಸಲ್ಮಾನರಿದ್ದಾರೆ. ಐರ್ಲೆಂಡಿನ—ಹಾಗೂ ರಷ್ಯಾದ ಸಾಂಸ್ಕೃತಿಕ ಆಂದೋಲನ ರಾಜಕೀಯ ದೃಷ್ಟಿಯ ಪಡಿನೆಳಲಾಗಿವೆ.

ದೂರದೃಷ್ಟಿಯಿಂದ ವಿವೇಚಿಸಿ, ಜೀವನದ ಉತ್ಕರ್ಷಕ್ಕಾಗಿಯೇ ರಾಜಕೀಯವಿರುವುದೆಂದು ಅರ್ಥಮಾಡಿದರೆ ಈ ನೋಟಕ್ಕೆ ಸಮಾಧಾನ ಸಿಕ್ಕುತ್ತದೆ. ಆದರೆ ಐರ್ಲೆಂಡ್, ರಷ್ಯಾಗಳ ಪ್ರಯತ್ನ—ಪಾಕಿಸ್ತಾನ, ಹಿಂದೂಸ್ಥಾನಗಳ ಸಮಸ್ಯೆ—ಜನತೆಗಿಂತಲೂ ಪಕ್ಷಪ್ರತಿಪಕ್ಷಗಳನ್ನು ಸಂಬಂಧಿಸಿದ್ದು; ನಾಯಕರ, ದೇಶಗಳ ಪ್ರೌಢಿಮೆಯನ್ನು ಸ್ಥಾಪಿಸಲು ಹೊರಟದ್ದು.

ವ್ಯಕ್ತಿ—ಸಮಾಜ—ಜನಾಂಗಗಳ ಸರ್ವತೋಮುಖ ಉನ್ನತಿಯನ್ನು ಸಾಧಿಸುವುದು ಸಂಸ್ಕೃತಿಯ ಘನ ಉದ್ದೇಶವೆಂಬ ತತ್ವವನ್ನು ಒಪ್ಪಿಕೊಂಡರೆ ನಮ್ಮ ಗುರಿಯನ್ನು ನಿರ್ದೇಶಿಸಿಕೊಂಡು, ಮಾರ್ಗವನ್ನು ಬದಲಾಯಿಸಬೇಕಾಗುತ್ತದೆ. ಪರಂಪರಾಗತವಾಗಿ ಬಂದಿರುವ ಸಂಸ್ಕೃತಿಯ ಅವಶೇಷ ಈ ಕೆಲಸವನ್ನು ಮಾಡುತ್ತದೆಯೇ—ವಿದೇಶಗಳಿಂದ ಬರಮಾಡಿಕೊಂಡ ಸಂಸ್ಕೃತಿಯ ಅನುಕರಣಗಳು ಮಾಡುತ್ತವೆಯೇ ವಿಚಾರಮಾಡಿ ನೋಡಬೇಕು. ಜನಾಂಗದ ಬಾಳು ಬದುಕನ್ನು ಸಜೀವವಾಗಿ ಉಳಿಸಲಾರದುದು ಸ್ವದೇಶದ್ದಾಗಲಿ ಪರದೇಶದ್ದಾಗಲಿ ತ್ಯಾಜ್ಯವಾಗುತ್ತದೆ. ಒಂದೊಂದು ದೇಶದ ಪರಿಸ್ಥಿತಿ, ಆವಶ್ಯಕತೆಗಳನ್ನು ಅನುಲಕ್ಷಿಸಿಯೇ ಅದರ ನೈಜ ಸಂಸ್ಕೃತಿ ಬೆಳೆಯುತ್ತದೆ. ನೈಸರ್ಗಿಕ ಬೆಳೆಯನ್ನು ಪರಂಪರೆಯ ಅನುಸರಣೆಯಿಂದಾಗಲಿ ಪರದೇಶಗಳ ಅನುಕರಣದಿಂದಾಗಲಿ ತಡೆಗಟ್ಟುವುದು ಪರಮದ್ರೋಹ.

ಗಾಂಧೀಯುಗ ಹುಟ್ಟಿದ ಮೇಲೆ ಭಾರತದ ಎಲ್ಲ ಕಡೆಯಲ್ಲಿಯೂ 'ಭಾರತೀಯತ್ವ'ದ ಶೋಧ ಆರಂಭವಾಯಿತು. ಒಂದೊಂದು ಪ್ರಾಂತ್ಯವೂ ಅದರ ಸುಪ್ತಚೈತನ್ಯವನ್ನು ಜಾಗ್ರತಗೊಳಿಸಲಾರಂಭಿಸಿತು. ಭಾರತ ಸಂಸ್ಕೃತಿಯೆಂಬುದು ಸಮನ್ವಯದ ಮಹದ್ಸಿದ್ಧಿ. ಇದಕ್ಕೆ ನಮ್ಮ (ನಮ್ಮ ಪ್ರಾಂತ್ಯದ) ಕಾಣಿಕೆಯೇನು? ಎಂದು ವಿವಿಧ ಭಾಷಾವಾರು ಪ್ರಾಂತ್ಯಗಳು ಯೋಚಿಸತೊಡಗಿದವು. ತೆಲುಗರು ನಾಗಾರ್ಜುನಕೊಂಡದ ಕಡೆ ನೋಡಿದರೆ ಕನ್ನಡಿಗರು ಎಲ್ಲೋರಾ, ಅಜಂತಾ, ಬೇಲೂರು, ಹಳೆಯಬೀಡು, ಹಂಪೆಗಳನ್ನು ನೋಡತೊಡಗಿದರು. ತಮಿಳರು ಚೋಳ, ಪಲ್ಲವ ಶಿಲ್ಪಗಳ ಕಡೆಗೆ ನಮ್ಮ ಲಕ್ಷ್ಯವನ್ನೆಳೆದರು. ಬಂಗಾಳಿಗಳು ಚಿತ್ರಕಲೆಯಲ್ಲಿ ಒಂದು ವಿನೂತನ ಸಂಪ್ರದಾಯವನ್ನಾರಂಭಿಸಿ ಎಲ್ಲರ ಲಕ್ಷ್ಯವನ್ನು ಸೆಳೆದರು. ಹಳೆಯ ಸಂಪ್ರದಾಯವನ್ನು ಬಿಡದೆ ಹೊಸದನ್ನು ಹೇಗೆ ಆರಂಭಿಸಬಹುದೆಂಬುದನ್ನು ತೋರಿಸಿಕೊಟ್ಟವರು ಬಂಗಾಳಿಗಳು.

ಈ ದೃಷ್ಟಿ ಇತರ ಪ್ರಾಂತ್ಯಗಳಲ್ಲಿ ಹಬ್ಬಿದಷ್ಟು ಕರ್ನಾಟಕದಲ್ಲಿ ಬೆಳೆಯಲಿಲ್ಲ. ಕನ್ನಡನಾಡು ಚೂರು ಚೂರಾಗಿ ಒಂದು ರಾಜ್ಯಾಡಳಿತದ ಕೆಳಗೆ ಬರದೆ, ಬೇರೆ ಬೇರೆ ಭಾಷಾ ಪ್ರಾಂತ್ಯಗಳ ಅಧೀನದಲ್ಲಿರುವುದು ಒಂದು ಕಾರಣ—ಮುಖ್ಯ ಕಾರಣ. ಎರಡನೆಯದು ಕನ್ನಡಿಗರ ಅಕ್ಷಮ್ಯ ಆಲಸ್ಯ. ಕನ್ನಡನಾಡಿನ ದಿಗ್ದರ್ಶನ ಮಾಡಿದರೆ 'ಕನ್ನಡತನ'ವನ್ನು ಹುಡುಕಬೇಕಾದಷ್ಟು ಪರನಾಡವರ ಪ್ರಭಾವ ಮೂಡಿದೆ.

ಲಲಿತಕಲೆಗಳಲ್ಲಂತೂ ಕನ್ನಡಿಗರ ಪರಿಸ್ಥಿತಿ ತುಂಬ ಶೋಚನೀಯ. ಚಿತ್ರಕಲೆಯಲ್ಲಿ ಒಂದು ಮಹಾಕ್ರಾಂತಿಯನ್ನು ೧೯೦೭ರಲ್ಲಿಯೇ ಬಂಗಾಳ ಮಾಡಿತು. ಅವನೀಂದ್ರನಾಥ ಠಾಕೂರರೂ, ನಂದಲಾಲ ಬಸು ಅವರೂ ಅಜಂತಾ, ಬಾಗ್, ಸೀತಾನ್ನಿವಾಸಲ್‌ಗಳ ಭಿತ್ತಿಚಿತ್ರಗಳ ಪ್ರತಿಮಾಡಿದುದಲ್ಲದೆ, ಅವುಗಳ ತಂತ್ರನೈಪುಣ್ಯ ರಸಭಾವಗಳನ್ನಳವಡಿಸಿಕೊಂಡು ಆಧುನಿಕ ಆಶೋತ್ತರಗಳನ್ನು ಪೂರೈಸುವ ಒಂದು ಸಂಪ್ರದಾಯವನ್ನೇ ಆರಂಭಿಸಿದರು. ಇವರ ಶಿಷ್ಯರು ಸಂಪ್ರದಾಯವನ್ನು ಭಾರತದ ವಿವಿಧ ಪ್ರಾಂತ್ಯಗಳಿಗೊಯ್ದರು. ಆಂಧ್ರಜಾತೀಯ ಕಳಾಶಾಲೆಗೆ ಸಂಸ್ಕೃತಿಯ ರಾಯಭಾರಿಗಳಾಗಿ ಬಂದ ಪ್ರಮೋದಕುಮಾರ ಚಟ್ಟೋಪಾಧ್ಯಾಯರು ಆಂಧ್ರನಾಗರಿ

ಕತೆಗಳವಡುವ ಚಿತ್ರಕಲಾ ಸಂಪ್ರದಾಯಕ್ಕೆ ನೆರವಾದರು. ದಾಮರ್ಲಾ ರಾಮರಾವ್, ಸತ್ಯನಾರಾಯಣ, ಅಡಿವಿ ಬಾಪಿರಾಜು, ಗುರ್ರಂ ಮಲ್ಲಯ್ಯ ಮೊದಲಾದ ಕುಶಲ ಕಲಾವಿದರು ಇದರಿಂದ ಸ್ಫೂರ್ತಿಗೊಂಡು ಭಾರತಾಂತರ್ಗತವಾದ ಆಂಧ್ರನಾಗರಿಕತೆಯನ್ನು ಚಿತ್ರಕಲೆಯಲ್ಲಿ ಮೂಡಲೆತ್ನಿಸಿದರು.

ಇಂತಹ ಪ್ರಯತ್ನ—ಕ್ರಾಂತಿಯನ್ನು ಕರ್ನಾಟಕದಲ್ಲಿ ಮಾಡಬಲ್ಲವರಿದ್ದಾರೆ. ಅವನೀಂದ್ರನಾಥ ಠಾಕೂರರ ಶಿಷ್ಯಕೋಟಿಗೆ ಸೇರಿದ ಕೆ. ವೆಂಕಟಪ್ಪನವರು, ನಂದಲಾಲ ಬಸು ಅವರ ಶಿಷ್ಯರಾದ ನಾರಾಯಣ ಸಂಗಮರು ತಟಸ್ಥರಾಗಿದ್ದಾರೆ. ಆದರೆ ಕೆಲಕೆಲವು ಚಿತ್ರಗಾರರು ಅಲ್ಲಲ್ಲಿ ಉತ್ತಮ ಪ್ರತಿಭೆಯನ್ನು ತೋರುತ್ತಿದ್ದಾರೆ. ಮಿಣಜಿಗಿಯವರ ಚಿತ್ರಗಳ ಭಾವ ಸೌಂದರ್ಯ, ಕಮಡೋಳಿಯವರ ಜೀವನ ದರ್ಶನ, ಎಲವಟ್ಟಿಯವರ ಪ್ರಕೃತಿ ನೋಟ, ಕೆ. ವೆಂಕಟಪ್ಪನವರ ಕೆತ್ತನೆಯ ಮೂರ್ತಿಗಳು, ವರ್ಖೇಡಿಯವರ ಶಿಲ್ಪ, ಸಿದ್ಧಲಿಂಗಸ್ವಾಮಿಗಳ ದೇವತಾಮೂರ್ತಿಗಳು ಕರ್ನಾಟಕದ ವೈಶಿಷ್ಟ್ಯವನ್ನು ಸಾರುತ್ತಿವೆ. ಆದರೆ ಇವರ ಕೃತಿಗಳು ಸಾಕಷ್ಟು ರಸಿಕರ ಗಮನಕ್ಕೆ ಬಂದಿಲ್ಲ. ಇವರ ಕೃತಿಗಳನ್ನು ಎತ್ತಿಹಿಡಿದು ಜಗತ್ತಿಗೆ ತೋರಿಸಬಲ್ಲ 'ಮಾಡರ್ನ್ ರೆವ್ಯೂ'—'ವಿಶಾಲಭಾರತ'—'ಭಾರತಿ' ಮೊದಲಾದ ಪತ್ರಿಕೆಗಳು ಕನ್ನಡದಲ್ಲಿಲ್ಲ.

ವೈಯಕ್ತಿಕವಾಗಿ ಕನ್ನಡ ಚಿತ್ರಕಾರರು, ಶಿಲ್ಪಿಗಳು ಮಾಡುತ್ತಿರುವ ಪ್ರಯತ್ನ ಸಾಲದು. ಶಾಂತಿನಿಕೇತನ, ನಾಗಾರ್ಜುನ ವಿದ್ಯಾಪೀಠದಂತಹ ಕಲಾಭ್ಯಾಸಂಗ ಕ್ಷೇತ್ರಗಳು ನಮ್ಮಲ್ಲಿ ಬೇಕು. ಕಲಾವಿದರು ಕೂಡಿ ಕನ್ನಡ ನಾಡಿನ ವೈಶಿಷ್ಟ್ಯ, ಸಾಂಸ್ಕೃತಿಕ ಪರಂಪರೆಗನುಗುಣವಾದ ಚಿತ್ರಕಲಾ ಪದ್ಧತಿಯನ್ನು ಆರಂಭಿಸಬೇಕು.

ಸಂಗೀತದ ಬಗ್ಗೆ ಕನ್ನಡನಾಡಿನ ಪರಿಸ್ಥಿತಿ ಇನ್ನೂ ಶೋಚನೀಯ. ಕನ್ನಡನಾಡಿನ ಮುಖ್ಯ ಪಟ್ಟಣಗಳಾದ ಬೆಂಗಳೂರು, ಮೈಸೂರು, ಮಂಗಳೂರು, ಬಳ್ಳಾರಿಗಳಲ್ಲಿ ಕೇಳಿ ಬರುವುದು ತೆಲುಗು ಕೀರ್ತನೆಗಳು, ಧಾರವಾಡ, ಹುಬ್ಬಳ್ಳಿ, ಕಾರವಾರ, ಬೆಳಗಾಂವಿ, ಸೊಲ್ಲಾಪುರಗಳಲ್ಲಿ ಕೇಳಿ ಬರುವುದು ಹಿಂದೀ ಚೀಸುಗಳು, ಉರ್ದು ಘಸಲ್ ಕವಾಲಿಗಳು. ಕನ್ನಡ ಹಾಡುಗಳ ಒಂದು ಕಛೇರಿಯೂ ಆಗುವುದಿಲ್ಲ.



ಶ್ರೀ ತ್ಯಾಗರಾಜರು

[ಪುಟ VIII

ಕನ್ನಡ ಹಾಡುಗಬ್ಬಗಳ ಇತಿಹಾಸ ೧೧ನೆಯ ಶತಮಾನದಂತ್ಯಕ್ಕೆ ಹೋಗುತ್ತದೆ. ನಿಜಗುಣ, ಮುಪ್ಪಿನ ಷಡಕ್ಷರಿ ಮೊದಲಾದವರು ಶೈವ ಸಂಪ್ರದಾಯವನ್ನು ಬೆಳಸಿದಂತೆ ೧೬ನೆಯ ಶತಮಾನದಲ್ಲಿ ದಾಸಕೂಟದ ನೂರಾರು ಹರಿದಾಸರು ವೈಷ್ಣವ ಪರಂಪರೆಯನ್ನು ಬೆಳಸಿದರು. ಲಕ್ಷೆ ಗಟ್ಟಳೆ ಹಾಡುಗಬ್ಬಗಳು ಈ ೯೦೦ ವರ್ಷ ಕನ್ನಡನಾಡಿನಲ್ಲಿ ಬೆಳೆದು ಬಂದಿವೆ. ಆದರೆ ತೆಲುಗು ಕೀರ್ತನೆಗಳ ದತ್ತುಪುತ್ರರಾದ ನಮ್ಮ ಸಂಗೀತ ಗಾರರ ಲಕ್ಷ್ಯ ಈ ಕಡೆ ಹೋಗಿಲ್ಲ. ಅವರ ಗಮನವನ್ನು ಸೆಳೆಯುವ ಪ್ರಯತ್ನವನ್ನು ಸಾಹಿತಿಗಳು ಮಾಡಿಲ್ಲ.

ಉತ್ತರ ಕರ್ನಾಟಕದಲ್ಲಿ ದಿವಂಗತ ಪಂಚಾಕ್ಷರಿ ಬೂವಾ ಅವರು ಕೆಲವು ವಚನಗಳನ್ನು ಹಾಡುತ್ತಿದ್ದರು. ವಚನಗಳ ಹಾಡುಗಾರಿಕೆಗೆ ಕರ್ನಾಟಕ ಪದ್ಧತಿಯೇ ಹೆಚ್ಚು ಸೊಗಸೆಂದು ಭಾವಿಸಿದ ನಾನು ೭-೭-೧೯೩೭ರಲ್ಲಿ ವಿದ್ವಾನ್ ಚಕ್ರಕೋಡಿ ನಾರಾಯಣಶಾಸ್ತ್ರಿಗಳ ಕಡೆಯಿಂದ ವಚನಗಳ ಕಛೇರಿಯೊಂದನ್ನು ಬೆಂಗಳೂರಿನ ವೀರಶೈವ ಸಮಾಜ ಸೇವಾ ಸಂಘದ ಸಹಕಾರದಿಂದ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಏರ್ಪಡಿಸಿದೆ. ತರುವಾಯ ಆಸ್ಥಾನ ವಿದ್ವಾನ್ ದೇವೇಂದ್ರಪ್ಪನವರೂ, ಮಲ್ಲಿಕಾರ್ಜುನ ಮನ್ಸೂರ್ ರವರೂ ವಚನಗಳನ್ನು ಹಾಡತೊಡಗಿದರು. ಆದರಿದೂ ಗುಪ್ತಗಾಮಿನಿಯಾಗಿದೆ. ಜನಸಾಮಾನ್ಯಕ್ಕೆ ಹಬ್ಬಿಲ್ಲ ವಚನಗಳ ಹಾಡುಗಾರಿಕೆ ಎಷ್ಟು ಪ್ರಸಾರವಾಗಬೇಕೋ ಅಷ್ಟಾಗಿಲ್ಲ.

ದಾಸರ ಕೃತಿಗಳನ್ನು ಬಿಡಾರಂ ಕೃಷ್ಣಪ್ಪನವರು ಅತ್ಯಮೋಘವಾಗಿ ಹಾಡುತ್ತಿದ್ದರು. ಇಡೀ ಕಛೇರಿಯನ್ನು ಅವರು ದಾಸರ ಕೃತಿಗಳಿಂದಲೇ ನಿರ್ವಹಿಸಿ ಪಂಡಿತ ಪಾಮರರ ಮನಸ್ಸಂತೋಷಪಡಿಸುತ್ತಿದ್ದರು. ಅವರ ಶಿಷ್ಯರಾದ ದೇವೇಂದ್ರಪ್ಪನವರು ಗುರುಮಾರ್ಗವನ್ನು ಇಂದಿಗೂ ಅನುಸರಿಸುತ್ತಿದ್ದಾರೆ. ಸುಬ್ಬರಾಮಯ್ಯನವರು, ಸೌಭಾಗ್ಯವತಿ ರಾಜಮ್ಮನವರು, ರಾಜಾರಾಯರು, ಶ್ರೀಮತಿ ಜಿ. ಚನ್ನಮ್ಮನವರು ದಾಸರ ಕೃತಿಗಳಿಗೆ ಪ್ರಸ್ತಾರ ಹಾಕಿ ಪ್ರಕಟಿಸುವ ಕೆಲಸವನ್ನಲ್ಲದೆ ಅವುಗಳನ್ನು ಸೊಗಸಾಗಿ ಹಾಡಿ, ನುಡಿಸಿ ಪ್ರಸಾರಮಾಡುತ್ತಿದ್ದಾರೆ.

ಈಚೆಗೆ ಸೌ || ರಾಜಮ್ಮನವರು (ಭಾರತಿ) ಸಂಗೀತರೂಪದಲ್ಲಿ ಕೆಲವು ರಾಷ್ಟ್ರಗೀತೆಗಳನ್ನು ಬರೆದಿದ್ದಾರೆ. ದೇವೇಂದ್ರಪ್ಪನವರು ಕೆಲವು ಕನ್ನಡ ಕೀರ್ತನೆಗಳನ್ನು ಬರೆದಿದ್ದಾರೆ. ಹುಬ್ಬಳ್ಳಿಯ ಶಂಕರದೀಕ್ಷಿತರು ಕೆಲವು ಕನ್ನಡ ಕೃತಿಗಳನ್ನು ಬರೆದಿದ್ದಾರೆ.

ನಮ್ಮ ಜೀವನ ಸರ್ವತೋಮುಖವಾಗಿ ಕನ್ನಡಮಯವಾದ ಹೊರತೂ ನಮ್ಮ ಸ್ವಸ್ವರೂಪಜ್ಞಾನೋದಯವಾಗುವುದಿಲ್ಲ. ಕನ್ನಡಿಗರ ಬಾಳಿನ ಬವಣೆ, ಆಸೆ, ಶಾಂತಿ, ರೋಷಾದಿ ಭಾವಗಳನ್ನು ಬೇರೆ ಭಾಷೆ ತಿಳಿಸಲಾರದು. ಜನತಾಶಿಕ್ಷಣಕ್ಕೆ ಸಂಗೀತ ಪರಮಸಾಧನವೆಂಬುದನ್ನು ನಿತ್ಯಗೊಳಿಸಬೇಕಾದಲ್ಲಿ ಆಯಾಯ ದೇಶಭಾಷೆಗಳಲ್ಲಿ ಅವುಗಳ ಸಂಗೀತವಿರಬೇಕು. ಕನ್ನಡ ನಾಡಿನಲ್ಲಿ ಸಂಗೀತವಿಷಯದಲ್ಲಂತೂ ಪರಭಾಷೆಗಳ ದಬ್ಬಾಳಿಕೆ ಸಹಿಸಲ ಸಾಧ್ಯವಾಗಿದೆ. ಕನ್ನಡ ಸಂಗೀತಗಾರರು ಪರಭಾಷೆಗಳ ಕೀರ್ತನೆ, ಚೀಸುಗಳ ದಳ್ಳಾಳಿಗಳಾಗಿದ್ದಾರೆ. ತಮಿಳುನಾಡಿನಲ್ಲಿ ಹುಟ್ಟಿರುವಂತಹ ಜಾಗೃತಿ ಕನ್ನಡನಾಡಿನಲ್ಲಿಯೂ ಹುಟ್ಟಬೇಕು. ತಮಿಳರು ತಮ್ಮ ವ್ಯಕ್ತಿತ್ವವನ್ನು ಸಂಗೀತದಲ್ಲಿ ಸ್ಥಾಪಿಸಲು ಮಾಡಿರುವ ಪ್ರಯತ್ನ ಅನುಕರಣೀಯವಾಗಿದೆ. ದೇವಕೋಟೆಯಲ್ಲಿ ನಡೆದ ತಮಿಳು ಸಂಗೀತ ಸಮ್ಮೇಳನದ ಆರಂಭ ಭಾಷಣ ಮಾಡುತ್ತಾ ರಾಜಾ ಸರ್ ಅಣ್ಣಾಮಲೆ ಚೆಟ್ಟಿಯಾರ್ ಅವರು ಹೇಳಿದ ಮಾತುಗಳು ಕನ್ನಡ ಸಂಗೀತದ ಬಗ್ಗೆಯೂ ಅನ್ವಯಿಸುತ್ತವೆ. "ತಮಿಳು ಸಂಗೀತಕ್ಕೆ ಒಗ್ಗುವ ಭಾಷೆ. ತೇವಾರ, ತಿರುಪ್ಪುಗಳ ಹಾಡುಗಳು ತುಂಬ ರಸವತ್ತಾಗಿವೆ........ನಮಗೆ ಬೇರೆ ಭಾಷೆಗಳ ಮೇಲೆ ದ್ವೇಷವಿಲ್ಲ. ತಮಿಳು ಜನರ ತಾಯ್ನುಡಿಯಾದ ತಮಿಳಿನಲ್ಲಿ ಹಾಡುಗಳ ರಚನೆಗೂ, ಹಾಡುವಿಕೆಗೂ ಪ್ರೋತ್ಸಾಹಕೊಡಬೇಕೆಂಬುದೇ ನಮ್ಮ ಉದ್ದೇಶ. ಮುತ್ತುಸ್ವಾಮಿ ದೀಕ್ಷಿತರವರ ಚಿತ್ರ ಅನಾವರಣಮಾಡುತ್ತಾ ಸರ್ ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್ ರವರು ಇಂತಹ ಪ್ರಯತ್ನಗಳು ಸಂಸ್ಕೃತಿಬಾಹಿರವಾದುವೆಂದು ಹೇಳಿದ್ದಾರೆ. ಅವರ ಅಭಿಪ್ರಾಯ ಸಾಧುವಾದುದಲ್ಲ. ತಮಿಳು ಹಾಡುಗಳಿರಬೇಕೆಂದು ನಾವು ಕೇಳುವುದನ್ನು ಹೊಸ ಸಂಗೀತ ಸಂಪ್ರದಾಯ ನಿರ್ಮಾಣಪ್ರಯತ್ನವೆಂದು ಭಾವಿಸಿ ಸರ್ ಅಲ್ಲಾಡಿಯವರು ತೆಗಳಿದ್ದಾರೆ. ಕರ್ನಾಟಕ ಸಂಗೀತ ಸಂಪ್ರದಾಯಕ್ಕೆ ಅಳಪಟ್ಟು ತಮಿಳು ಹಾಡುಗಳು ಬೇಕೆಂದು ನಾವು

ಕೇಳುತ್ತಿರುವುದು—ಅದೇ ರಾಗ, ತಾಳ ಸಂಪ್ರದಾಯ ಬೇಕು ನಮಗೆ—ತಮಿಳುಭಾಷೆಯಲ್ಲಿ. ಖಂಡಿತವಾಗಿಯೂ ಇದು ಸಂಸ್ಕೃತಿ ಬಾಹಿರವಾಗಲಾರದು.

ಸಂಗೀತಕ್ಕೆ ಭಾಷೆ ಮುಖ್ಯವಾದುದಲ್ಲವೆಂದು ಸರ್ ಅಲ್ಲಾಡಿಯವರ ಅಭಿಪ್ರಾಯ. ಸರ್ ಅಲ್ಲಾಡಿಯವರ ಅಭಿಪ್ರಾಯ ಸತ್ಯವಾದುದಾಗಿದ್ದರೆ ಭಕ್ತಿಗೀತೆಗಳು ಭಾವೋದ್ರೇಕವನ್ನೂ, ವೀರಗೀತೆಗಳು ರಣಪ್ರಿಯತೆಯನ್ನು ಹುಟ್ಟಿಸುವುದೇಕೆ ? ಆದರೂ ಅಲ್ಲಾಡಿ ಹೇಳಿದ್ದಾರೆ ' ಭಾಷೆ ತಿಳಿದರೆ ಹೆಚ್ಚು ಚೆನ್ನ ' ಎಂದು. ಪದರಹಿತ ಸಂಗೀತ ಒಳ್ಳೆಯದು, ಪದಸಹಿತವಾದುದು ಇನ್ನೂ ಒಳ್ಳೆಯದು. ನಾವು ಹೇಳುವುದಿಷ್ಟೇ—ಸಂಗೀತದ ಸ್ವರಗಳಿಗಿಂತಲೂ ಉತ್ತಮವಾದ ಪದಗಳನ್ನು ಸಂಯೋಜಿಸಿದ ಸಂಗೀತವನ್ನು ಕೊಡಿ ಎಂದು. ಖಂಡಿತವಾಗಿಯೂ ಈ ಕೋರಿಕೆ ಸಂಸ್ಕೃತಿ ಬಾಹಿರವಾಗಲಾರದು.

ಸರ್ ಅಲ್ಲಾಡಿಯವರ ಮೂರನೆಯ ಆಕ್ಷೇಪ ಸಂಗೀತವನ್ನು ಹೇಳಿ ಮಾಡಿಸುವುದಕ್ಕಾಗುವುದಿಲ್ಲ, ಬಹುಮಾನ, ಪಾರಿತೋಷಕಗಳಿಂದ ಉತ್ತಮ ಸಂಗೀತ ನಿರ್ಮಾಣವಾಗುವುದಿಲ್ಲ. ನಿಜ, ಸಂಗೀತ ಕಲಾವಿಹೀನನಿಗೆ ಬಹುಮಾನಕೊಟ್ಟು ಒಂದು ಕೀರ್ತನೆ ಮಾಡಿಸುವುದಕ್ಕಾಗುವುದಿಲ್ಲ. ಆದರೆ ಪ್ರತಿಫಲದ ಆಸೆ-ಧನ, ಕೀರ್ತಿಗಳ ಆಸೆ ಯೋಗ್ಯತೆಯುಳ್ಳವರಿಗೆ ಪ್ರೇರಕವಾಗುತ್ತದೆ. ಈ ದೇಶದಲ್ಲಿ ಬಹಳ ಜನ ಸಂಗೀತಗಾರರಿದ್ದಾರೆ. ಆದರೆ ಯಾರೂ ಪ್ರತಿಫಲವಿಲ್ಲದೆ ಹಾಡಲು ಹೋಗುವುದಿಲ್ಲ. ಅನೇಕ ಸಲ ಅವರಿಗೆ ಕೈತುಂಬ ಹಣಕೊಡಬೇಕಾಗುತ್ತದೆ. ಒಣ ಸ್ತುತಿಗಿಂತಲೂ ಗಟ್ಟಿಯಾದ ಪ್ರತಿಫಲ ದೊರಕುವುದಾದರೆ ಹೊಸ ಗೀತಾರಚಕರು ಬರುತ್ತಾರೆ. ಕೇವಲ ಪ್ರತಿಭೆಯ ಬಲದಿಂದಲೇ ರಚನಾತ್ಮಕ ಕೆಲಸಮಾಡುತ್ತಿರುವವರನ್ನು ಪ್ರತಿಫಲ ಹೆದರಿಸಲಾರದು.

ನಮಗೆ ಬೇರೆ ಭಾಷೆಗಳ ಮೇಲೆ ದ್ವೇಷವಿಲ್ಲ. ಪ್ರತಿಯೊಂದು ದೇಶದಲ್ಲಿಯೂ ಆಯಾಯ ಸಮಾಜ ತನಗನುಗುಣವಾದ ಮಾರ್ಗವನ್ನು ಅವಲಂಬಿಸುವುದಕ್ಕೆ ಅವಕಾಶವಿರಬೇಕು. ಈ ವೈಯಕ್ತಿಕ ಗುಣವಿಸ್ತರಣೆ ಸಮಷ್ಟಿಯ ಕಲ್ಯಾಣಕ್ಕೆ ನೆರವಾಗಬೇಕು. ಇದೇ ಪ್ರಜಾಸ್ವಾಮ್ಯದ ತಿರುಳು. ಸಂಗೀತಕ್ಕೆ ಭಾಷೆ ಮುಖ್ಯ. ಭಾಷೆ ಮುಖ್ಯವಾಗಿರಬೇಕಾದರೆ ಅದು ಜನಕ್ಕೆ

ತಿಳಿಯುವ ಭಾಷೆಯಾಗಿರಬೇಕು. ಅದಕ್ಕೇ ನಾವು ತಮಿಳು ಹಾಡುಗಳು ಬೇಕೆಂದು ಹೇಳುತ್ತಿರುವುದು. ಸಂಗೀತದ ಉದ್ದೇಶ ಕೇವಲ ಇಂದ್ರಿಯ ಚಾಪಲ್ಯವನ್ನು ಪೂರೈಸುವುದಲ್ಲ. ಅದರ ಉದ್ದೇಶ ದೈವಿಕವಾದುದು. ಕೆಲ ಕಾಲವಾದರೂ ಲೋಕವನ್ನು ಮರೆತು, ಪರಮಾತ್ಮನನ್ನು ಧ್ಯಾನಿಸುವಂತೆ ಅದು ಮಾಡಬಲ್ಲುದು.

ಕಛೇರಿಗಳಲ್ಲಿ ಬೇರೆ ಭಾಷೆಗಳ ಹಾಡುಗಳನ್ನು ಹಾಡುವುದಕ್ಕೆ ನಮ್ಮ ಅಭ್ಯಂತರವಿಲ್ಲ. ಈಗ ತಮಿಳು ಹಾಡುಗಳಿಗೆ ,ತಮಿಳು ಕಛೇರಿಗಳಿಂದ ದೊರೆತಿರುವ 'ಅರ್ಧಚಂದ್ರ ಪ್ರಯೋಗ' ತೊಲಗಬೇಕು. ಅದು ತನ್ನ ಯುಕ್ತಸ್ಥಾನವನ್ನ ಡರಬೇಕು." *

ಕನ್ನಡಿಗರ ದೃಷ್ಟಿ, ಧೋರಣೆಗಳೂ ಇವೇ ಆಗಿವೆ. ಕನ್ನಡ ದೇಶ ದಲ್ಲಿ ಸಂಗೀತ ಕಛೇರಿ (ಜಲಸಾ)ಗಳಲ್ಲಿ ಕನ್ನಡಕ್ಕೆ ದೊರೆತಿರುವ ತಿರಸ್ಕಾರ ಅಸಹನೀಯವಾಗಿದೆ.

ತಮಿಳರ ಈಸ್ಥೈ ಚಳುವಳಿಯಿಂದ ಈ ಐದು ವರ್ಷಗಳಲ್ಲಿ ಭಾರತಿ, ಸ್ವಾತಿ ತಿರುನಾಳ್, ಮುತ್ತಯ್ಯಭಾಗವತರ್, ಶರವಣಭವಾನಂದ, ವೇದ ನಾಯಕಂ ಪಿಳ್ಳೈ, ದೊರೆಸ್ವಾಮಿ ಕವಿರಾಯರ್, ಅರುಣಾಚಲಕವಿ, ಪಾಪ ವಿನಾಶ ಮೊದಲಿಯಾರ್, ಮುತ್ತು ತಾಂಡವರ್, ರಾಮಲಿಂಗಸ್ವಾಮಿ, ಮಾರಿಮುತ್ತು ಪಿಳ್ಳೈ, ಪಾಪನಾಶನಂ ಶಿವನ್ ಮೊದಲಾದವರ ಕೃತಿಗಳು ಪ್ರಸಾರಕ್ಕೆ ಬಂದಿವೆ. ಅಣ್ಣಾಮಲೆ ಚೆಟ್ಟಿಯಾರವರ ಪ್ರೋತ್ಸಾಹದಿಂದ ಹೊಸ ಕೃತಿ ರಚಕರು ಮುಂದೆ ಬರುತ್ತಿದ್ದಾರೆ. ತೆಲುಗಿಗೆ ಶರಣುಹೋಗು ತ್ತಿದ್ದ ದೊಡ್ಡ ದೊಡ್ಡ ವಿದ್ವಾಂಸರು ತಮಿಳು ಕೀರ್ತನೆಗಳಿಂದಲೇ ಕಛೇರಿ ನಡಸುತ್ತಿದ್ದಾರೆ.

ಕೀರ್ತನೆಗಳ ವಿಷಯದಲ್ಲಿ ತಮಿಳಿಗಿಂತ ಕನ್ನಡ ಭಂಡಾರ ದೊಡ್ಡದು. ನಿಜಗುಣಾದಿ ಹಾಡುಗಬ್ಬಗಾರರು, ಬಸವಣ್ಣಾದಿ ವಚನಕಾರರು, ಪುರಂದ ರಾದಿ ಕೀರ್ತನಕಾರರು ಸಹಸ್ರಾರು ಹಾಡುಗಳನ್ನು ಬರೆದಿಟ್ಟಿದ್ದಾರೆ. ಕನ್ನಡ ಜನಪದ ಸಾಹಿತ್ಯದಲ್ಲಿ ಸೊಗಸಾದ ಹಾಡುಗಳು, ಲಾಲಿಗಳೂ ದೊರೆಯು ತ್ತವೆ. ನಾಟಕ ಶಿರೋಮಣಿ ವರದಾಚಾರ್ಯರು ಶಾಸ್ತ್ರೋಕ್ತವಾದ

---

* ಹಿಂದೂ. ಮದರಾಸು. ೨೫-೧೦-೧೯೪೧

ನೂರಾರು ಕನ್ನಡ ಹಾಡುಗಳನ್ನು ಬರಸಿದ್ದಾರೆ. ಈಚೆಗೆ ವಿ. ಸೀತಾರಾಮಯ್ಯ, ರಂ. ಶ್ರೀ. ಮುಗಳಿ, ಭಾರತಿ, ಮೊದಲಾದ ಕವಿ, ಕವಯಿತ್ರಿಯರು ಕೀರ್ತನೆಗಳಂತೆ ಹಾಡಬಲ್ಲ ಗೀತೆಗಳನ್ನು ಬರೆದಿದ್ದಾರೆ. ಕನ್ನಡ ಸಂಗೀತಗಾರರು ಮನಸ್ಸುಮಾಡಿದರೆ ಅವರಿಗೆ ಕೀರ್ತನೆಗಳನ್ನು ಬರೆದು ಕೊಡಬಲ್ಲ ಅನೇಕ ಕವಿಗಳು ಕನ್ನಡನಾಡಿನಲ್ಲಿ ದೊರೆತಾರು.

ಕನ್ನಡ ಸಂಗೀತ ಕನ್ನಡ ಭಾಷೆಯಲ್ಲಿ ಆಗಬೇಕು—ಇದೇ ಕನ್ನಡ ನಾಡಿನಲ್ಲಿ ಪ್ರಸಾರದಲ್ಲಿರಬೇಕಾದ ಸಂಗೀತ ಎಂಬುದು ನಮ್ಮ ನಿರ್ದಿಷ್ಟ ಅಭಿಪ್ರಾಯ. ಆದರೆ ನಮ್ಮ ಸಂಗೀತ ಬರೀ ಭಕ್ತಿರೋದನೆಯಾಗಿರಬಾರದು. ತ್ಯಾಗರಾಜ ಕೀರ್ತನೆಗಳ ಈ 'ಏಕತಾನ' ವನ್ನು ಕೇಳಿ ನಾವು ಬೇಸತ್ತಿದ್ದೇವೆ. ನಮ್ಮ ಜನಾಂಗದ ಮುನ್ನಡೆಗೆ ನೆರವಾಗುವ ಭಾವರಸಗಳು ಸಂಗೀತದಲ್ಲಿ ಆವಿರ್ಭೂತವಾಗಬೇಕು. ಭಕ್ತಿಯೊಂದೇ ಸಾಲದು–ಬೇಕು ನಮಗೆ ವೀರ–ಶೃಂಗಾರ-ಅದ್ಭುತಾದಿ ರಸಗಳು. ಕಛೇರಿಗೆ ಬಂದವರು ಭಕ್ತಿಗೀತೆಗಳನ್ನು ಕೇಳಿ ಅಪುತಿಂದವರಂತೆ ಹೋದರೆ ಸಾಲದು–ಅವರಲ್ಲಿ ನವಜೀವನದ ಕಲರವ ಸಂಗೀತದಿಂದ ಹುಟ್ಟಬೇಕು.

ಕನ್ನಡನಾಡಿನ ಮುಖ್ಯ ಪಟ್ಟಣಗಳಾದ ಬೆಂಗಳೂರು, ಮೈಸೂರು, ಮಂಗಳೂರು, ಬಳ್ಳಾರಿಗಳಲ್ಲಿ ಸಂಗೀತ ಪ್ರೇಮಿಗಳ ಸಂಖ್ಯೆ ಹೆಚ್ಚುತ್ತಿದೆ. ಗಾಯನ ಸಮಾಜಗಳು, ಮ್ಯೂಸಿಕ್ ಸರ್ಕಲ್‌ಗಳೂ ಬೆಳೆಯುತ್ತಿವೆ. ಆದರೆ ಈ ಸಮಾಜ ಸರ್ಕಲ್‌ಗಳು ಮಾಡುತ್ತಿರುವುದೇನು?—ಸಂಗೀತದ ವ್ಯಾಪಾರ. ದಕ್ಷಿಣಾದಿ ಸಂಗೀತಗಾರರನ್ನು ಹೊರಗಿನಿಂದ ಕರಸಿ ಅವರಿಗೆ ಬೊಗಸೆ ಬೊಗಸೆ ಹಣ ಕೊಟ್ಟು ಕಳುಹಿಸುವುದು. ಸ್ಥಳೀಯ ವಿದ್ವಾಂಸರಿಗೆ ಪ್ರೋತ್ಸಾಹವಿಲ್ಲ. ಸಾಲದುದಕ್ಕೆ ಕನ್ನಡ ಸಂಗೀತ ವಿದ್ವಾಂಸರ ವಿರುದ್ಧ ಪ್ರಚಾರಮಾಡುವ ಕೆಲಸವೊಂದು ಈ ಸಂಸ್ಥೆಗಳ ಕಾರ್ಯಭಾಗ. ಈ ಸುಲಿಗೆಯ ವ್ಯಾಪಾರ ದೇಶದ ಹಿತದ ದೃಷ್ಟಿಯಿಂದ ನಿಲ್ಲಬೇಕು. ಸ್ಥಳೀಯ ಸಂಗೀತ ವಿದ್ವಾಂಸರು ಸಂಘಟಿತರಾಗಿ ಇಂತಹ ಧಾಳಿಗಳನ್ನು ಎದುರಿಸುವ ಮಾರ್ಗಗಳನ್ನು ನಿಯೋಜಿಸಬೇಕು. ಹೊರಗಿನಿಂದ ಸಂಗೀತ ವಿದ್ವಾಂಸರನ್ನು ಕರೆಸಬಾರದು, ಅವರ ಸಂಗೀತವನ್ನು ಕೇಳಬಾರದು ಎಂದು ನನ್ನ ಅಭಿಪ್ರಾಯವಲ್ಲ. ಆದರೆ ಅದರಲ್ಲಿಯೂ ಒಂದು ಇತಿಮಿತಿಯಿರಬೇಕು. ಮನೆಯ ಮಕ್ಕಳ ಬಾಯಿ

ಕಟ್ಟಿ ಹೊರಗಿನವರಿಗೆ ವೃಷ್ಟಾನ್ನ ಭೋಜನ ಮಾಡಿಸುವುದು ಯಾವ ನ್ಯಾಯ ?

ನಾಟಕದ ಸ್ಥಿತಿಯೂ ಹೇಳಿಕೊಳ್ಳುವ ಹಾಗಿಲ್ಲ. ನಾಟಕಶಿರೋಮಣಿ ಎ. ವಿ. ವರದಾಚಾರ್ಯರ ಕಾಲದಲ್ಲಿ ಕನ್ನಡನಾಟಕ ಅತ್ಯುನ್ನತ ಶಿಖರವನ್ನು ಮುಟ್ಟಿತು. ಮಹಮುದ್ ಪೀರರವರೂ, ಜಿ. ಎಚ್. ವೀರಣ್ಣನವರೂ ಅದನ್ನು ಹಲವು ವಿಧದಲ್ಲಿ ಬೆಳಸಿದರು. ಮೈಸೂರು, ಬೆಂಗಳೂರು, ಮಂಗಳೂರು, ಬಾಗಿಲುಕೋಟೆ, ಧಾರವಾಡದ ನಾಟ್ಯ ವಿಲಾಸಿಗಳು ಕೆಲವು ಸ್ವಾರಸ್ಯವಾದ ಪ್ರಯೋಗಗಳನ್ನು ನಡೆಸಿದರು. ಆದರಿಂದು ನಾಟ್ಯೋಪಜೀವಿಗಳಲ್ಲಾಗಲಿ, ನಾಟ್ಯವಿಲಾಸಿಗಳಲ್ಲಾಗಲಿ ನಾಟಕದ ಬಗ್ಗೆ ಸಾಕಷ್ಟು ಕಳಕಳಿಯಿಲ್ಲ. ಉತ್ತಮ ನಟರಾದ ಹಂದಿಗನೂರು ಸಿದ್ಧರಾಮಪ್ಪ, ಬಸವರಾಜ ಮನ್‌ಸೂರ್, ರಾಮಚಂದ್ರಶಾಸ್ತ್ರಿ, ಎಚ್. ಎಲ್. ಎನ್. ಸಿಂಹ ಮೊದಲಾದವರು ಸಣ್ಣಪುಟ್ಟ ಸಂಘಗಳನ್ನು ಕಟ್ಟಿಕೊಂಡು ತೊಳಲಾಡುತ್ತಿದ್ದಾರೆ. ಸಂಘಗಳನ್ನು ಬೆಳಸಿ, ಆಧುನಿಕ ರಂಗೋಪಕರಣಗಳಿಂದ ಅವುಗಳನ್ನು ಸಿದ್ಧಗೊಳಿಸಿ ಹೊಸ ಹೊಸ ಪ್ರಯೋಗಗಳನ್ನು ನಡೆಸುವುದಕ್ಕೆ ಹಣದ ಅಭಾವ, ಪ್ರೋತ್ಸಾಹದ ದಾರಿದ್ರ್ಯ. ಎಲ್ಲಕ್ಕೂ ಮೊದಲಾಗಿ ನಾಟಕ ಪ್ರದರ್ಶನಕ್ಕೆ ಮಂದಿರಗಳಿಲ್ಲ. ಪ್ರತಿ ಊರಿನ ನಾಟಕಶಾಲೆಯೂ ಸಿನೀಮಾ ಮಂದಿರವಾಗಿದೆ. ಸಿನೀಮಾ ನಿಲ್ಲಿಸಿ ನಾಟಕಕ್ಕೆ ಮಂದಿರವನ್ನು ಒಂದೆರಡು ದಿವಸ ಬಿಟ್ಟು ಕೊಡಲು ಅವರು ಅಪಾರ ಹಣಬೇಡುತ್ತಾರೆ. ಈ ಸಮಸ್ಯೆಯನ್ನು ಸ್ಥಳೀಯ ನಗರ ಸಭೆಗಳು ಎದುರಿಸಬೇಕು. ನಾಟಕ, ಸಂಗೀತಗಳ ಸಲುವಾಗಿಯೇ ಸ್ಥಳೀಯ ನಗರ ಸಭೆಗಳು ಸಭಾಭವನಗಳನ್ನು ಕಟ್ಟಿಸಿ, ಕನ್ನಡ ನಾಟಕ ಮಂಡಳಿಗಳಿಗೆ ಅವುಗಳ ಉಪಯೋಗವನ್ನು ಅತ್ಯಲ್ಪ ಶುಲ್ಕಕ್ಕೆ ಕೊಡಬೇಕು.

ಕನ್ನಡ ಕಲೆಗಳ ಉತ್ಕರ್ಷಕ್ಕಾಗಿ ಒಂದು 'ಕಲಾ ಪರಿಷತ್ತ'ನ್ನು (Academy of Kannada Arts) ಸ್ಥಾಪಿಸಬೇಕು.* ಕನ್ನಡನಾಡಿನ ಸರ್ಕಾರಗಳು, ಶ್ರೀಮಂತರು, ಕಲಾವಿದರು ಈ ಬಗ್ಗೆ ಲಕ್ಷ್ಯಕೊಡಬೇಕು.

---

* ಈ ವಿಷಯವನ್ನು ನನ್ನ "ಕನ್ನಡದ ದಾರಿ" (ಪುಟ ೧೩೦) ಗ್ರಂಥದಲ್ಲಿ ಪ್ರಸ್ತಾಪಿಸಿದ್ದೇನೆ.

ಎಲ್ಲ ಕಡೆಯಲ್ಲಿಯೂ ಯುದ್ಧಾನಂತರದ ನಿಯೋಜನೆಗಳು ಹೊರಟಿರುವಾಗ ಕನ್ನಡನಾಡಿನ ಆರ್ಥಿಕ, ರಾಜಕೀಯ, ಲಲಿತಕಲಾ ಸಮಸ್ಯೆಗಳ ಬಗ್ಗೆ ಕನ್ನಡ ಜನ ತಳೆದಿರುವ ಆಲಸ್ಯ ಅಕ್ಷಮ್ಯ.

ಈ ಗ್ರಂಥವನ್ನು ಬರೆಯುವ ವಿಚಾರ ನನ್ನಲ್ಲಿ ಹುಟ್ಟಿ ಬಹಳ ವರ್ಷಗಳಾದವು. ನಾನು 'ಕನ್ನಡನುಡಿ' ವಾರ ಪತ್ರಿಕೆಯ ಸಂಪಾದಕನಾಗಿದ್ದಾಗ (೧೯೩೮) ಕೆಲವು ಕಲಾವಿದರ ಪರಿಚಯ ಬರೆದು ಪ್ರಕಟಿಸಿದೆ. 'ಇದು ಏಕೆ'– 'ಇದು ಕೃಷ್ಣರಾಯರ ಕೆಲವು ಗೆಳೆಯರ ಪ್ರಸಾರ' ಎಂದು ಮೂಗು ಮುರಿದವರೇ ಹೆಚ್ಚು. ನಾನು ಲೇಖನಮಾಲೆಯನ್ನು ಮುಂದುವರಿಸಿ ಕೆಲವನ್ನು ಪ್ರಜಾಮತ ದೀಪಾವಳಿ ಸಂಚಿಕೆಗಳಲ್ಲಿಯೂ, ಜಯಕರ್ನಾಟಕದಲ್ಲಿಯೂ ಪ್ರಕಟಿಸಿದೆ. ಆ ಲೇಖನಗಳನ್ನು ಪರಿಷ್ಕರಿಸಿ, ಹೊಸ ವಿಷಯಗಳನ್ನು ಸೇರಿಸಿ, ಹಲವು ಹೊಸ ಲೇಖನಗಳನ್ನು ಕೂಡಿಸಿ ಈ ಪುಸ್ತಕವನ್ನು ಪ್ರಕಟಿಸಿದ್ದೇನೆ. ಇದನ್ನು ಭಾಗ ೧ ಎಂದು ಓದುಗರು ಪರಿಗಣಿಸಬೇಕು. ಕನ್ನಡ ನಾಡಿನ ಕಲಾವಿದರ ಪರಿಚಯಗಳನ್ನು ಮುಂದುವರಿಸಿ ಮುಂದೆ ಮೂರು ಭಾಗಗಳನ್ನಾಗಿ ಪ್ರಕಟಿಸಬೇಕೆಂದು ಸಂಕಲ್ಪ. ಒಟ್ಟು ನಾಲ್ಕು ವಿಭಾಗಗಳಲ್ಲಿ ಸುಮಾರು ೬೪ ಜನ ಕನ್ನಡ ಸಂಗೀತಗಾರರು, ಶಿಲ್ಪಿಗಳು, ಚಿತ್ರಗಾರರು, ನರ್ತಕನರ್ತಕಿಯರ ಪರಿಚಯ ಕೊಡಲು ಸಾಧ್ಯವಾಗುತ್ತದೆ.

ವಿಷಯಗಳನ್ನು ಸಂಗ್ರಹಿಸುವಾಗ ನಾನು ಪಟ್ಟ ಪಾಡು ಅಷ್ಟಿಷ್ಟಲ್ಲ. ನಮ್ಮ ಕಲೆಗಳ ಬಗ್ಗೆ ಜನತೆಯಲ್ಲೆಷ್ಟು ತಾತ್ಸಾರವೋ ಕಲಾವಿದರಲ್ಲಿಯೂ ಅಷ್ಟೇ ಆಲಸ್ಯ. ಸಂಗೀತಗಾರರು ಇದ್ದಲ್ಲಿ ಹೋಗಿ, ಅವರ ವೇಳೆ ಅನುಕೂಲಗಳನ್ನು ನೋಡಿಕೊಂಡು ಅವರ ಗೆಳೆಯರು ಸಹಾಧ್ಯಾಯಿಗಳನ್ನು ಕಂಡು ವಿಷಯಸಂಗ್ರಹಣ ಮಾಡಬೇಕಾಯಿತು. ಇದಕ್ಕಾಗಿ ಊರೂರು ತಿರುಗಬೇಕಾಯಿತು. ಇಂದು ಪರಿಚಯ ಗ್ರಂಥಗಳ ಮೊದಲನೆಯ ಭಾಗ ಹೊರಡಿಸುವುದು ನನಗೆ ಹಿಗ್ಗಿನ ವಿಷಯ. ಇದರ ಮಹತ್ವ ನಮ್ಮ ಕಲಾವಿದರಿಗೆ, ಜನತೆಗೆ ಅರ್ಥವಾದರೆ ನನ್ನ ಶ್ರಮ ಸಾರ್ಥಕವಾಗುತ್ತದೆ.

ಈ ಗ್ರಂಥಕ್ಕೆ ಬೇಕಾದ ಚಿತ್ರಗಳನ್ನು ಒದಗಿಸಿಕೊಟ್ಟ ಕಟ್ಟಿ (ಬೆಳಗಾಂವಿ) ಕಮಡೋಳಿ (ಹುಬ್ಬಳ್ಳಿ) ಸೀತಾರಾಮ್ (ವಾನ್‌ಡೀಕ್ ಸ್ಟುಡಿಯೋ ಬೆಂಗಳೂರು) ವಿಶ್ವಕರ್ನಾಟಕ (ಬೆಂಗಳೂರು) ಎಸ್. ಎನ್. ಸ್ವಾಮಿ

(ಮೈಸೂರು) ಅವರಿಗೂ, ಕೆಲವು ಪಡಿಯಚ್ಚುಗಳನ್ನು ಎರವಲಿತ್ತ ಕನ್ನಡ ಸಾಹಿತ್ಯ ಪರಿಷನ್ಮಂದಿರ, ಸುಬೋಧ ಕಾರ್ಯಾಲಯ, ಪ್ರಜಾಮತ ಕಾರ್ಯಾಲಯ, ವರದಾಚಾರ್ಯರ ಸ್ಮಾರಕ ಕಲಾಸಂಘ, ಬಿ. ಪುಟ್ಟಸ್ವಾಮಯ್ಯನವರು, ದ. ಕೃ. ಭಾರದ್ವಾಜರು ಅವರಿಗೂ ಮುದ್ರಣಾದಿ ಕೆಲಸಗಳಲ್ಲಿ ನೆರವಾದ ಕುಮಾರ ವೆಂಕಣ್ಣ, ವಿ. ರಾಮಕೃಷ್ಣ, ಎಂ. ಎಸ್. ಚಿಂತಾಮಣಿ ಅವರಿಗೂ ನನ್ನ ಧನ್ಯವಾದಗಳು ಸಲ್ಲಬೇಕಾಗಿದೆ.

"ಅನ್ನಪೂರ್ಣ. ವಿಶ್ವೇಶ್ವರಪುರಂ"
ಬೆಂಗಳೂರು ನಗರ. ೧-೫-೧೯೪೬

ಅ. ನ. ಕೃಷ್ಣರಾಯ.

———

# ಪರಿವಿಡಿ





# ಚಿತ್ರಗಳು

# ಅ. ನ. ಕೃಷ್ಣರಾಯರ ಗ್ರಂಥಗಳು

**ಲಲಿತಕಲೆ**

ಕರ್ನಾಟಕದ ಕಲಾವಿದರು
ರಾಜಾ ರವಿವರ್ಮ

**ಕಥೆ**

ಕಣ್ಣುಮುಚ್ಚಾಲೆ
ಪಾಪ-ಪುಣ್ಯ
ಕಾಮನ ಸೋಲು
ಜಾತಿಹೀನನ ಮನೆಯ ಜ್ಯೋತಿ
ಕಿಡಿ
ಮಿಂಚು

**ಕಾದಂಬರಿ**

ಜೀವನಯಾತ್ರೆ
ಉದಯರಾಗ
ಸಂಧ್ಯಾರಾಗ
ಮಂಗಳಸೂತ್ರ
ಸಾಹಿತ್ಯರತ್ನ
ನಟಸಾರ್ವಭೌಮ

**ಜೀವನಚರಿತ್ರೆ**

ಬಸವಣ್ಣನವರ ಅಮೃತವಾಣಿ
ಸ್ವಾಮಿ ವಿವೇಕಾನಂದ

**ಸಂಪಾದಿತ**

ಮರುಳಸಿದ್ಧ ಕಾವ್ಯ

**ಇತರ**

ನನ್ನನ್ನು ನಾನೇ ಕಂಡೆ

**ಪ್ರಬಂಧ**

ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ
ಹೊಸ ಹುಟ್ಟು
ಸಾಹಿತ್ಯ ಮತ್ತು ಜೀವನ
ಕನ್ನಡದ ದಾರಿ
ಅಖಂಡ ಕರ್ನಾಟಕ

**ನಾಟಕ**

ಮದುವೆಯೋ-ಮನೆಹಾಳೋ
ಆಹುತಿ
ಆದದ್ದೇನು
ಗೋಮುಖವ್ಯಾಘ್ರ
ಎರಡು ನಾಟಕಗಳು
ಬಣ್ಣದ ಬೀಸಣಿಗೆ
ರಜಪೂತಲಕ್ಷ್ಮೀ

**ಸಂಕಲನ**

ಪ್ರಣಯಗೀತಗಳು
ರಸಋಷಿ
ಕಾಮನಬಿಲ್ಲು
ಭಾರತೀಯ ಕಥಾಸಾಹಿತ್ಯ
ಪ್ರಗತಿಶೀಲ ಸಾಹಿತ್ಯ
ಮ್ಯಾಕ್ಸಿಂ ಗಾರ್ಕಿ




ಮಲ್ಲಿಕಾರ್ಜುನ ಮನ್ಸೂರ್



ಮನಸೂರ್–ಗೆಳೆಯರು

ಪುಟ ೩]

# ೧. ಸಂಗೀತರತ್ನ ಮಲ್ಲಿಕಾರ್ಜುನ ಮನ್‌ಸೂರ್

ಸಂಗೀತ ಕೆಲವರಿಗೆ ಜೀವನೋಪಾಯಕ್ಕೆ ಮಾರ್ಗ; ಕೆಲವರಿಗೆ ಸ್ವಪ್ರತಿಷ್ಠೆಗೆ ಒಂದು ಸಾಧನ; ಕೆಲವರಿಗೆ ಯೋಗ. ಅಂಗಡಿಗಳಲ್ಲಿ ದವಸ ದಿನಸುಗಳನ್ನು ಮಾರುವಂತೆ ಸಂಗೀತವನ್ನು ಕೆಲವರು ಮಾರುತ್ತಾರೆ. ಕೆಲವರು ಅದು ತಾಯಿಯಂತೆ ಪವಿತ್ರವಾದ ವಸ್ತುವೆಂದು ಪೂಜಿಸುತ್ತಾರೆ. ಅದರ ಸೇವೆಯನ್ನೆಷ್ಟು ಮಾಡಿದರೂ ಚಿತ್ತ ದಣಿಯದು, ಮನ ತಣಿಯದು. ಸಂಗೀತವನ್ನು ಯೋಗವೆಂದು ತಿಳಿದು, ಅದರ ಭಾವಸಮಾಧಿಯಲ್ಲಿ ತಲ್ಲೀನ ರಾಗುವವರಲ್ಲಿ ಧಾರವಾಡದ ಮಲ್ಲಿಕಾರ್ಜುನ ಮನ್‌ಸೂರ್‌ರವರೊಬ್ಬರು. ಅವರಿಗೆ ಜೀವನವೇ ಒಂದು ಗೀತ - ಜಗತ್ತೇ ಒಂದು ರಾಗ - ಲೋಕ ವ್ಯಾಪಾರವೇ ಒಂದು ನಾದಲೀಲೆ.

ಮಲ್ಲಿಕಾರ್ಜುನರಿಗೆ ಈಗ ೨೮ ನೆಯ ವಯಸ್ಸು ನಡೆಯುತ್ತಿದೆ. ಎಳಸಾದ ಮುಖ, ತೆಳ್ಳನೆಯ ನೀಳವಾದ ದೇಹಾಕಾರ, ವಿಶಾಲವಾದ ತುಂಬಿದ ಕಣ್ಣುಗಳು. ಅವರನ್ನು ನೋಡಿದರೆ ಯಾರೋ ಕಾಲೇಜು ವಿದ್ಯಾರ್ಥಿ ಅನ್ನುವ ಹಾಗಿದ್ದಾರೆ. ಕೆಲವು ನಿಮಿಷ ಜತೆಯಲ್ಲಿ ಕೂಡುವುದೇ ತಡ - ಏನೋ ಒಂದು ಗುಂಯ್ ಶಬ್ದ - ಕಿವಿಗೊಟ್ಟು ಕೇಳಿದರೆ ಘನರಾಗ ಒಂದರ ಆಲಾಪ. ಜತೆಯಲ್ಲಿದ್ದವರು ಅತ್ತಿತ್ತ ನೋಡಿ ಇದು ಅಂಗಡಿ, ಇದು ಮಾರ್ಕೆಟ್ ಎಂದುಕೊಳ್ಳಬಹುದು. ಆದರೆ ಗಾಯಕನಿಗೆ ವಾತಾವರಣದ ಪರಿವೆಯೇ ಇಲ್ಲ. ತಾನಾಯಿತು, ತನ್ನ ನಾದಸಂಭ್ರಮವಾಯಿತು.

ಮಲ್ಲಿಕಾರ್ಜುನರು ಅಚ್ಚಕನ್ನಡಿಗರು, ಧಾರವಾಡಕ್ಕೆ ಎರಡು ಮೈಲಿ ದೂರವಿರುವ ಮನ್ಸೂರ್ ಹಳ್ಳಿಯವರು. ಅವರ ತಂದೆ ಮನ್ಸೂರಿನ ಗೌಡ ಭೀಮರಾಯಪ್ಪನವರು. ಗೌಡರಿಗೆ ಸಂಗೀತದ ಮೇಲೆ ಬಹಳ ಪ್ರೇಮ. ಅಪ್ಪಯ್ಯನೆಂಬ ಕರ್ನಾಟಕ ಸಂಗೀತಗಾರನನ್ನು ಮನೆಯಲ್ಲಿಟ್ಟುಕೊಂಡು ಸಾಕಿದ್ದರು. ತಂದೆಯ ಅಭಿರುಚಿ ಮಗನ ಮೇಲೂ ಪ್ರಭಾವ ಮಾಡಿತು. ಮಲ್ಲಿಕಾರ್ಜುನರಿಗೆ ಮೊದಲಿನಿಂದಲೂ ಸಂಗೀತದ ಮೇಲೆ ಪ್ರೇಮ ಬಹಳ. ಕೊನೆಗೆ ಸಂಗೀತದ ಕರೆ ಹೆಚ್ಚಾಗಿ ಹತ್ತನೆಯ ವಯಸ್ಸಿನಲ್ಲಿ ತಾವು ಓದುತ್ತಿದ್ದ ಮೂರನೆಯ ಈಯತ್ತೆಗೆ ಶರಣುಹೊಡೆದು ನಾಲ್ಕುವರ್ಷ ಕಾಲ ಪ್ರಸಿದ್ಧ ಬಾಲಕೃಷ್ಣಬೂವಾ ಮಿರಾಜ್‌ಕರ್‌ರವರ ಶಿಷ್ಯಂದಿರಾದ ನೀಲಕಂಠಬೂವಾ ಅವರಲ್ಲಿ ಗಾನವನ್ನು ಅಭ್ಯಸಿಸಿದರು. ಈ ಸಂಪ್ರದಾಯದವರು ಉತ್ತರ ಹಿಂದೂಸ್ಥಾನದ ಸಂಗೀತ ಪದ್ಧತಿಯ ಆಚಾರ್ಯನಾದ ತಾನಸೇನ್ (ಹರಿದಾಸರ ಶಿಷ್ಯ) ಮತ್ತು ಅವನ ಶಿಷ್ಯಕೋಟಿಗೆ ಸೇರಿದ ರಹಮತ್ ಖಾನರ ಪದ್ಧತಿಯವರಾದುದರಿಂದ ಮಲ್ಲಿಕಾರ್ಜುನರ ವಿದ್ಯಾಭ್ಯಾಸದ ಬುನಾದಿ ಸುಭದ್ರವೂ, ವ್ಯವಸ್ಥಿತವೂ ಆಯಿತು. ಆ ಚಿಕ್ಕ ವಯಸ್ಸಿನಲ್ಲಿಯೇ ಮುಂಬಯಿ, ನಾಗಪುರ, ಜಲಗಾಂವ, ಸಿಕಾರಪುರ (ಸಿಂಧ್) ದೇಶಗಳಲ್ಲಿ ಕಛೇರಿ ಮಾಡಿ ಕೀರ್ತಿ ಗಳಿಸಿದರು. ಆ ಕಾಲದಲ್ಲಿ ಒಂದೆರಡು ನಾಟಕ ಕಂಪೆನಿಗಳ ದರ್ಶನವೂ ಆಗಿ ಮಲ್ಲಿಕಾರ್ಜುನರು ಮತ್ತೆ ನಾಟಕ ಕಂಪೆನಿಗಳ ಕಡೆ ಕತ್ತೆತ್ತದಂತೆ ಮಾಡಿದವು. ಕೀರ್ತಿ ಮಲ್ಲಿಕಾರ್ಜುನರನ್ನು ಆಶ್ರಯಿಸಿದ್ದರೂ ಅವರು ಅದರ ಪ್ರಲೋಭನೆಗೆ ಮರುಳಾಗಲಿಲ್ಲ. ತಮ್ಮ ಪಾಂಡಿತ್ಯದ ಆಳ ಅವರಿಗೆ ಗೊತ್ತಿತ್ತು. ಇನ್ನೂ ಕಲಿಯಬೇಕು. ಹೆಚ್ಚಿನ ವಿದ್ಯೆಯನ್ನು ಗಳಿಸಬೇಕು ಎಂದು ಮನ ಹಾತೊರೆಯುತ್ತಿತ್ತು. ಆದರೆ ಸರಿಯಾದ ಗುರು ದೊರಕಿರಲಿಲ್ಲ. ಸರಿಯಾದವರಲ್ಲಿ ಕಲಿಯಲು ಹಣದ ಅಭಾವ; ಸಾಧಾರಣದವರಲ್ಲಿ ಕಲಿಯಲು ಮನಸ್ಸಿಲ್ಲ. ಈ ಹೊಯ್ದಾಟ ಮಲ್ಲಿಕಾರ್ಜುನರ ಜೀವನದಲ್ಲಿ ನಾಲ್ಕುವರ್ಷ ನಡೆಯಿತು. ಊರಿನಲ್ಲಿ ಕುಳಿತು ಕಲಿತಿದ್ದ ವಿದ್ಯೆಯನ್ನು ರೂಢಿಸಿಕೊಳ್ಳುತ್ತಿದ್ದರು.

ಈ ಕಾಲದಲ್ಲಿ ಒಮ್ಮೆ ಮುಂಬಯಿಗೆ ಹೋಗಬೇಕಾಗಿ ಬಂತು. ಅಲ್ಲಿ ತಮ್ಮ ಗೆಳೆಯರಾದ ವಿಷ್ಣುಪಂತ ಪಗನೀಸರ (ಈಚೆಗೆ ತುಕಾರಾಮ ಚಿತ್ರ

ದಲ್ಲಿ ಪ್ರಖ್ಯಾತರಾದವರು) ಸರಾಫ್ ಅಂಗಡಿಯಲ್ಲಿ ಕುಳಿತಿದ್ದಾಗ, ಪಗನೀಸರು ಒಬ್ಬ ವ್ಯಕ್ತಿಯ ಪರಿಚಯ ಮಾಡಿಕೊಟ್ಟರು. ಮಲ್ಲಿಕಾರ್ಜುನರು ಹಾಡುವವರೆಂದು ತಿಳಿದಮೇಲೆ ಖಾನ್‌ಸಾಹೇಬ್ ಮಂಜೀಖಾನರು "ನಿಮ್ಮ ಗಾನ ಕೇಳಿಸಿರಿ" ಎಂದು ಹೇಳಿದರು. ಮಲ್ಲಿಕಾರ್ಜುನರು ಅವರನ್ನು ಕರೆದೊಯ್ದು ಹತ್ತಿರದಲ್ಲಿದ್ದ ಗ್ರಾಮಫೋನ್ ಅಂಗಡಿಯಲ್ಲಿ ತಮ್ಮ ರಿಕಾರ್ಡು ಗಳನ್ನು ಕೇಳಿಸಿದರು. ಆ ವೇಳೆಗೆ ಮಲ್ಲಿಕಾರ್ಜುನರು ಎರಡುಸಲ ೧೬ ರಿಕಾರ್ಡುಗಳನ್ನು ಕೊಟ್ಟಿದ್ದರು. ಮಲ್ಲಿಕಾರ್ಜುನರ ರಿಕಾರ್ಡುಗಳನ್ನು ಕೇಳಿದ ಖಾನಸಾಹೇಬರು "ಮುಂದೆ ಏನು ಮಾಡಬೇಕೆಂದಿರುವಿರಿ" ಎಂದರು. "ಹೆಚ್ಚಿನ ವಿದ್ಯೆ ಕಲಿಯಬೇಕೆಂದಿದ್ದೇನೆ." "ಯಾರಲ್ಲಿ?" "ತಾವು ಕೃಪೆಮಾಡಿದರೆ ತಮ್ಮಲ್ಲಿ. ತಾವು ಶಿಷ್ಯರನ್ನು ತೆಗೆದುಕೊಳ್ಳುವು ದಿಲ್ಲದೆಂದು ಕೇಳಿದ್ದೆ. ಅದಕ್ಕೇ ಈ ಮೊದಲು ತಮ್ಮಲ್ಲಿಗೆ ಬರಲಿಲ್ಲ." "ನಾನು ಯಾರು ಗೊತ್ತೇ." "ಗೊತ್ತು, ಆಚಾರ್ಯ ಅಲ್ಲಾದಿಯಾ ಖಾನಸಾಹೇಬರ ಮಕ್ಕಳು." ಮಂಜೀಖಾನರು ವಿಶ್ವಾಸದಿಂದ "ಮಲ್ಲಿಕಾರ್ಜುನ್, ನಿಮಗೆ ಗಾನ ಹೇಳಿಕೊಟ್ಟರೆ ನಮ್ಮ ವಿದ್ಯೆ ಸಾರ್ಥಕ ವಾಗುತ್ತದೆ. ಬನ್ನಿ-ಖಂಡಿತ ಹೇಳಿಕೊಡುತ್ತೇವೆ" ಎಂದು ಆಶ್ವಾಸನ ವನ್ನಿತ್ತರು. ಮಲ್ಲಿಕಾರ್ಜುನರ ಭಾಗ್ಯದ ಬಾಗಿಲು ತೆರೆಯಿತು. ಅನಾ ಯಾಸವಾಗಿ ಮಂಜೀಖಾನರಂತಹ ಗುರುಗಳು ದೊರೆತರು. ಅವರಲ್ಲಿ ಎರಡುವರ್ಷ ಒಂದೇಸಮನೆ ಅನನ್ಯಭಕ್ತಿಯಿಂದ ವಿದ್ಯಾರ್ಜನೆ ಮಾಡಿದರು. ಖಾನಸಾಹೇಬರು ದಿವಸಕ್ಕೆ ಐದುಗಂಟೆಗಳ ಕಾಲ ಶಿಷ್ಯನಿಗೆ ತಮ್ಮ ಅಮರ ವಿದ್ಯೆಯನ್ನು ಧಾರೆಯೆರೆಯುತ್ತಿದ್ದರು.

ಖಾನ್‌ಸಾಹೇಬ್ ಮಂಜೀಖಾನರ ತಂದೆ ಸಂಗೀತಾಚಾರ್ಯ ಅಲ್ಲಾ ದಿಯಾಖಾನರನ್ನು ಸಂಗೀತಪ್ರಪಂಚ ದೇವರಂತೆ ಪೂಜಿಸುತ್ತದೆ. ಜಯ ಪುರದಲ್ಲಿ ಅವರದು ಪ್ರಸಿದ್ಧವಾದ ಸಂಗೀತದ ಮನೆತನ. ಅಲ್ಲಾದಿಯಾ ಅವರ ಸೋದರರು, ಸೋದರರ ಮಕ್ಕಳು ಎಲ್ಲರೂ ಪ್ರಸಿದ್ಧ ವಿದ್ವಾಂಸ ರಾಗಿದ್ದಾರೆ. ಸಂಗೀತಶಾಸ್ತ್ರ, ಕಲೆ ಎರಡರಲ್ಲಿಯೂ ಅಲ್ಲಾದಿಯಾ ಅಂದರೆ ಅಲ್ಲಾ-ದಿಯಾನೆ. ಅವರ ಶಿಷ್ಯೆಯಾದ ಬಾಯ್ ಕೇಸರಿಬಾಯಿ ರಾಗರಾಣಿ ಯೆನಿಸಿಕೊಂಡಿದ್ದಾಳೆ. ಜರೀವಾಲರೆಂಬ ಮುಂಬಯಿಯ ಪ್ರಸಿದ್ಧ ಪಾರಶಿ

ಶ್ರೀಮಂತರು ಅಲ್ಲಾದಿಯಾ ಅವರ ಶಿಷ್ಯರು. ಮಂಜೀಖಾನರು ನಾಲ್ಕು ವರ್ಷಗಳ ಕೆಳಗೆ ಮದರಾಸಿನಲ್ಲಿ ಆದ ಸಂಗೀತ ಸಮ್ಮೇಳನದಲ್ಲಿ ಹಾಡಿ ದಿವಂಗದ ಸಿ. ಆರ್. ಶ್ರೀನಿವಾಸ ಅಯ್ಯಂಗಾರ್ಯರಿಂದ 'ಮಹಾನುಭಾವ' ಎನಿಸಿಕೊಂಡರು. ಇಂತಹ ಗುರು, ಗುರುಪರಂಪರೆ ಮಲ್ಲಿಕಾರ್ಜುನರಿಗೆ ದೊರೆತುದು ಕನ್ನಡಿಗರ ಭಾಗ್ಯ. ಮಂಜೀಖಾನರಲ್ಲಿ ವಿದ್ಯಾರ್ಜನೆ ಮುಗಿಯಲು ಮಲ್ಲಿಕಾರ್ಜುನರು ಉತ್ತರ ಹಿಂದೂಸ್ಥಾನವನ್ನು ಸಂಚರಿಸಿ ಪ್ರಮುಖ ಪಟ್ಟಣಗಳಲ್ಲೆಲ್ಲಾ ಕಛೇರಿಗಳನ್ನು ಮಾಡಿಬಂದರು. ೧೯೩೪ ರಲ್ಲಿ ಗದುಗಿನ ಮಹಾಜನರು ಮಲ್ಲಿಕಾರ್ಜುನರಿಗೆ 'ಸಂಗೀತರತ್ನ' ಎಂಬ ಬಿರುದನ್ನೂ, ಮಾನಪತ್ರವನ್ನೂ ಸಮರ್ಪಿಸಿದರು. ೧೯೩೭ ರಲ್ಲಿ ಷಿಕಾರಿಪುರ (ಸಿಂಧ್) ದಲ್ಲಿ ಆದ ಅಖಿಲ ಭಾರತೀಯ ಸಂಗೀತ ಸಮ್ಮೇಳನದಲ್ಲಿ ಮಲ್ಲಿಕಾರ್ಜುನರ ಗಾನಕ್ಕೆ ಮೂರು ದಿವಸ ದೊರೆಯಿತು. ಈ ಗೌರವ ಇದುವರೆಗೆ ಬೇರೆ ಯಾವ ಸಂಗೀತ ವಿದ್ವಾಂಸನಿಗೂ ದೊರೆತಿಲ್ಲ. ೧೯೩೮ ರಲ್ಲಿ ಧರ್ಮಪುರದ ಮಹಾರಾಜರ ಅಧ್ಯಕ್ಷತೆಯಲ್ಲಿ ಮುಂಬಯಿಯಲ್ಲಾದ ಅ. ಭಾ. ಸಂ. ಸಮ್ಮೇಳನದಲ್ಲಿ ಮಲ್ಲಿಕಾರ್ಜುನರು ಹಾಡಿ ಎಲ್ಲರನ್ನೂ ತಣಿಸಿದರು. ಅದರ ಪ್ರಭಾವವೆಂಬಂತೆ ಮುಂಬಯಿಯ ರೇಡಿಯೋನಲ್ಲಿ ಒಂದೇ ತಿಂಗಳಲ್ಲಿ ಎರಡುಸಲ ಹಾಡಿದರು. ಮತ್ತೆ ಮತ್ತೆ ಮಲ್ಲಿಕಾರ್ಜುನರ ಗಾನವನ್ನು ಅಪೇಕ್ಷಿಸಿ ನೂರಾರು ಶ್ರೋತೃಗಳು ರೇಡಿಯೋ ಅಧಿಕಾರಿಗಳಿಗೆ ಪತ್ರ ಬರೆದಿದ್ದಾರೆ. ಮಲ್ಲಿಕಾರ್ಜುನರ ಗಾನದಲ್ಲಿರುವ ಮೋಹಕ ಶಕ್ತಿಗೆ ಎರಡು ದೃಷ್ಟಾಂತಗಳನ್ನು ಕೊಡಬಹುದು. ಒಂದುಸಲ ಆಹ್ವಾನಿತರಾಗಿ ಮಲ್ಲಿಕಾರ್ಜುನರು ನಾಗಪುರಕ್ಕೆ ಹೋಗಿದ್ದರು. ನಾಗಪುರದ ವಿಶ್ವವಿದ್ಯಾನಿಲಯದ ಸ್ಥಾನಪತಿಗಳೇ ಅಂದಿನ ಅಧ್ಯಕ್ಷರು. ಗಾಯಕರ ಪರಿಚಯ ಮಾಡಿಕೊಡಿ ಎಂದು ಕೇಳಿದಾಗ ಸ್ಥಾನಪತಿಗಳು ಮಲ್ಲಿಕಾರ್ಜುನರ ತರುಣಾಕಾರವನ್ನು ನೋಡಿ ಅಲ್ಲಗಳೆದುಬಿಟ್ಟರು. ಗಾನ ಆರಂಭವಾಯಿತು. ಸ್ಥಾನಪತಿಗಳ ಮೆಚ್ಚಿನ ಗಾಯಕನೆಂದರೆ ರಹಮತ್‌ಖಾನ್. ಅವನ ಬಾನಿಯನ್ನೇ ಮಲ್ಲಿಕಾರ್ಜುನರು ತಮ್ಮ ಗಾನಕಳೆಯಲ್ಲಿ ತರಲು ಸ್ಥಾನಪತಿಗಳು ಗಾಯಕನನ್ನಪ್ಪಿ, ತಮ್ಮ ಕಿಸೆಯನ್ನು ಅವರ ಮಡಿಲಿಗೆ ಬರಿದುಮಾಡಿಬಿಟ್ಟರು. ಇನ್ನೊಂದುಸಲ ಮುಂಬಯಿಯಲ್ಲಿ ಮಲ್ಲಿಕಾರ್ಜುನರ ಗಾನ

ವಾಯಿತು. ದೇಶಮುಖನೆಂಬ ಶ್ರೀಮಂತ ತರುಣ ಅವರ ಗಾನ ಕೇಳಿ ಮುಗ್ಧನಾಗಿಬಿಟ್ಟ. ಮಾರನೆಯ ದಿವಸ ಠಾಣ್ಯದಲ್ಲಿ ಮಲ್ಲಿಕಾರ್ಜುನರ ಗಾನ. ಅಲ್ಲಿಗೂ ಹಿಂಬಾಲಿಸಿದ. ಕಛೇರಿ ಮುಗಿಯಲು ರಾತ್ರಿ ೨ ಗಂಟೆಯಾಯಿತು. ಆ ರಾತ್ರಿಯಲ್ಲಿ ಹೋಗಲು ಸ್ಥಳವಿಲ್ಲದೆ ಒಂದು ಜಗುಲಿಯ ಮೇಲೆ ಹರಕು ಚಾಪೆಯೊಂದರ ಮೇಲೆ ಶ್ರೀಮಂತ ತರುಣ ಮಲಗಿ ಸುಖವಾಗಿ ನಿದ್ರಿಸಿದ.

ಮಲ್ಲಿಕಾರ್ಜುನರು ತಾವು ಗಾಯಕರಾಗಿರುವುದರಿಂದಲೇ ತೃಪ್ತಿ ಹೊಂದದೆ ಗಾಯನವಿದ್ಯೆಗೆ ಎಲ್ಲ ರೀತಿಯಲ್ಲಿಯೂ ಪ್ರೋತ್ಸಾಹಕೊಡುತ್ತಲೂ ಇದ್ದಾರೆ. ಧಾರವಾಡ, ನಾಗಪುರ, ಹೈದರಾಬಾದಿನ ಸಂಗೀತ ಸಮಾಜಗಳು ಹುಟ್ಟಿಕೊಂಡುದು ಇವರ ಪ್ರೇರಣೆ, ಬೆಂಬಲಗಳಿಂದಲೇ. ಶಾಸ್ತ್ರದ ಬಗ್ಗೆ ವಿಮರ್ಶೆ, ಚರ್ಚೆಯೆಂದರೆ ಇವರಿಗೆ ಪ್ರೀತಿ. ಪ್ರತಿ ಮಾತಿನಲ್ಲಿಯೂ ಹೊಸ ವಿಷಯಗಳನ್ನು ತಿಳಿಯುವ - ಕಲಿಯುವ ಹಂಬಲವನ್ನು ಚೆನ್ನಾಗಿ ವ್ಯಕ್ತಪಡಿಸುತ್ತಾರೆ.

ಇವರ ಧ್ವನಿ ಸಂಗೀತಕ್ಕಾಗಿಯೇ ಮಾಡಿದ ಧ್ವನಿ. ತುಂಬಿದ ಎತ್ತರದ ಶ್ರುತಿ. ತಾರಕ, ಮಂದ್ರ ಸ್ಥಾಯಿಗಳಲ್ಲಿ ಸಂಪೂರ್ಣ ಸ್ವಾತಂತ್ರ್ಯವನ್ನು ಪ್ರದರ್ಶಿಸುತ್ತಾರೆ. ಸ್ವರಗೆಲಸ (ತಾನ) ದಲ್ಲಿ ಗುರುಪರಂಪರೆಯಂತೆ ಮಲ್ಲಿಕಾರ್ಜುನರು ಅಪ್ರತಿಮರು. ಪ್ರತಿಯೊಂದು ಸ್ವರವೂ ಶುಭ್ರವಾಗಿ ತುಂಬಿ ಇವರ ಬಾಯಿಂದ ಬರುತ್ತದೆ, ವಿಳಂಬಕಾಲದ ಗಾನ, ಲಯಕಾಲದ ಕೆಲಸವೆಂದರೆ ಮಲ್ಲಿಕಾರ್ಜುನರಿಗೆ ತುಂಬ ಪ್ರೀತಿ. ಪಲ್ಲವಿಯನ್ನು ವಿಳಂಬದಲ್ಲಿ ಹಾಡುವಾಗ ಅಮೋಘವಾದ ಅರ್ಥರೇಖುಗಳು ಕಾಣಿಸಿಕೊಳ್ಳುತ್ತವೆ. ಅಸ್ತಾಯಿ, ಅಂತರ (ಪಲ್ಲವಿ, ಅನುಪಲ್ಲವಿ) ಗಳನ್ನು ಹಾಡುವಾಗ ಇವರ ಮಿಾಂಡ್ (ವರೇಖು) ಕೆಲಸ ಸರ್ವೋತ್ಕೃಷ್ಟದ್ದಾಗಿರುತ್ತದೆ. ತಮ್ಮ ಗುರುಗಳಾದ ಅಲ್ಲಾದಿಯಾಖಾನರ ಸಂಗೀತದ ವಿಚಾರ ಪ್ರಸ್ತಾವಿಸುತ್ತಾ "ಮಿಕ್ಕ ಗವಾಯಿಗಳಿಗೂ ನಮ್ಮ ಗುರುಗಳಿಗೂ ಒಂದೇ ಭೇದ ನೋಡಿ. ಮಿಕ್ಕವರು ನೂರು ಕೆಲಸ ಮಾಡುತ್ತಾರೆ. ಅವುಗಳಲ್ಲಿ ಕೆಲವು ಹುಸಿ, ಕೆಲವು ಗಟ್ಟಿ. ನಮ್ಮ ಗುರುಗಳ ಕೆಲಸದಲ್ಲಿ ಹುಸಿಯ ಮಾತೇ ಇಲ್ಲ" ಎಂದು ಹೇಳಿದುದನ್ನು ಮಲ್ಲಿಕಾರ್ಜುನರ ಗಾನಕ್ಕೇ ಅನ್ವಯಿಸ

ಬಹುದು. ತಾರಸ್ಥಾಯಿಯ ತಾನಗಳು, ತಾರ ಮಂದ್ರ ಸ್ಥಾಯಿಗಳ ಸಂಚಾರ ಕೆಲಸಗಳು ನುರಿತ ಗಾಯಕರನ್ನೂ ಡಂಗುಗೊಳಿಸುತ್ತವೆ. ಇದಕ್ಕೆ ಇವರ ಶಾರೀರಧರ್ಮವೂ ಸ್ವಲ್ಪ ಕಾರಣ. ಇವರ ಶಾರೀರವನ್ನು ಶ್ರುತಿ ವೀಣೆಯೆಂದು ಕರೆಯಬಹುದು.

ಮಲ್ಲಿಕಾರ್ಜುನರು ಯಾವ ಕಛೇರಿಯಲ್ಲಿಯೂ ಸಾಧಾರಣ ರಾಗಗಳ ಪ್ರತಿಪಾದನೆಗೆ ಹೋಗುವುದಿಲ್ಲ. ತೋಡಿ, ಭೀಮಪಲಾಸ್, ಯಮನ್, ಬಾಗೇಶ್ರೀ ರಾಗಗಳನ್ನು ಒಮ್ಮೊಮ್ಮೆ ಹಾಡಿದರೆ ಅವುಗಳ ಮೇಲೆ ತಮ್ಮ ವ್ಯಕ್ತಿತ್ವದ ಮುದ್ರೆಯನ್ನೊತ್ತುತ್ತಾರೆ. ನಂದ, ಜಯಜಯವಂತೀ, ಮಾರವ ಬಿಹಾಗ್, ಬಿಭಾಸ್, ಅಸಾವೇರಿ, ನಾಯಕಿ ಕಾನಡಾ, ಶಂಕರ, ಖಂಬಾವತಿ, ನಟಬಿಹಾಗ್, ಛಾಯಾನಟ, ಗೌಡಮಲ್ಹಾರ ಮೊದಲಾದ ಅಪರೂಪವಾದ ಹಾಗೂ ಕಷ್ಟಸಾಧ್ಯವಾದ ರಾಗಗಳ ವಿಸ್ತಾರವನ್ನೂ ಬೆಳವಳಿಗೆಯನ್ನೂ ಲೀಲಾಜಾಲವಾಗಿ ನಿರ್ವಹಿಸಿಬಿಡುತ್ತಾರೆ. ಮಾರವ - ಬಿಹಾಗ್, ಭೈರವ - ಬಹರ್, ನಟ - ಬಿಹಾಗ್ ಮೊದಲಾದ ದ್ವಂದ್ವ ಮೇಳ ರಾಗಗಳನ್ನು ಹಾಡುವಾಗ ಮಲ್ಲಿಕಾರ್ಜುನರ ಪ್ರತಿಭೆಯೂ ನಿಜವಾದ ವಿದ್ಯಾ ಗುಣವೂ ಹೊರಬೀಳುತ್ತದೆ. ದಕ್ಷಿಣಾದಿ ವಿದ್ವಾಂಸರಂತೆ ಮಲ್ಲಿಕಾರ್ಜುನರ ಸಂಪ್ರದಾಯದವರು ತಾಳಕ್ಕೆ ಮಹತ್ವ ಕೊಡತಕ್ಕವರು ; ಆದರೆ ತಾಳದ ವಿಕ್ರೀತದಾಸರಲ್ಲ. ಗಾಯನದ ಉದ್ದೇಶವನ್ನು ಚರ್ಚಿಸುತ್ತಾ, "ಅದು ಸರ್ವಾಂತರ್ಯಾಮಿ, ಸರ್ವರ ಹೃದಯವನ್ನೂ ಅದು ಬೆಳಗಬೇಕು, ಅದಕ್ಕೆ ಪಂಡಿತ ಪಾಮರ ಭೇದವಿಲ್ಲ" ಎಂದು ಹೇಳಿದರು.

"ನೀವು ಹಾಡುವ ಚೀಸು (ಹಾಡುಗಳನ್ನು) ಗಳನ್ನು ಕನ್ನಡದಲ್ಲಿ ಏಕೆ ಕೂಡಿಸಬಾರದು ; ನಮ್ಮ ಶಿವಶರಣರ ಮತ್ತು ಹರಿದಾಸರ ಕೃತಿಗಳು ಘನವಾಗಿ ನಿಮ್ಮ ಪ್ರಸ್ತಾರ ವಿಸ್ತಾರಗಳಿಗೆ ಒಗ್ಗುವುದಲ್ಲಾ" ಎಂದು ನಾನು ಹೇಳಿದೆ. ನನ್ನ ಸಲಹೆಯನ್ನು ಸಂತೋಷದಿಂದ ಸ್ವೀಕರಿಸಿ ಒಂದೆರಡು ಬಸವಣ್ಣನವರ ವಚನಗಳನ್ನು ಕೂಡಿಸಿ ಕೆಲದಿವಸಗಳಲ್ಲಿ ನನ್ನ ಮುಂದೆ ಹಾಡಿದರು. ಅವುಗಳನ್ನು ಬೇಗ ರಿಕಾರ್ಡುಗಳಲ್ಲಿ ಕೇಳುವ ಪುಣ್ಯ ನಮ್ಮದಾಗುವುದೆಂದು ಹೇಳಬಲ್ಲೆ. ಮಲ್ಲಿಕಾರ್ಜುನರಿಗೆ ಕನ್ನಡದ ಮೇಲೆ ಅತ್ಯಂತ ಪ್ರೇಮ. ಸಾರ್ಥಕವಾಗುವ ರೀತಿಯಲ್ಲಿ ಕನ್ನಡನಾಡಿನ ಸೇವೆ

ಮಾಡಬೇಕೆಂದು ಬಯಸುತ್ತಾರೆ. ಇಂತಹ ಚಿಕ್ಕವಯಸ್ಸಿನಲ್ಲಿ ಅಪಾರ ವಿದ್ಯೆಯನ್ನು ದೊರಕಿಸಿಕೊಂಡು. ಉತ್ತರ ಸಂಗೀತದ ಕೇಂದ್ರಗಳಲ್ಲಿ ಕನ್ನಡದ ಬಾವುಟವನ್ನು ಮೆರೆಯಿಸಿದ ಕಲಾವಿದನನ್ನು ಕನ್ನಡತಾಯಿ ಮೆಚ್ಚದಿದ್ದಾಳೆ ?

೧೦ – ೨ – ೧೯೩೯

## ತರುವಾಯ

ಮಲ್ಲಿಕಾರ್ಜುನರ ಪ್ರತಿಭೆ ಅವ್ಯಾಹತವಾಗಿ ಬೆಳೆಯುತ್ತ ಬಂದಿದೆ. ಇಂದಿಗೂ ತಾವು ವಿದ್ಯಾರ್ಥಿಗಳು ಎಂಬ ನಿರಹಂಭಾವ ಮಲ್ಲಿಕಾರ್ಜುನರಲ್ಲಿ ತುಂಬಿ ತುಳುಕುತ್ತಿದೆ. ದಿವಂಗತ ಮಂಜೀಖಾನರ ತಮ್ಮಂದಿರಾದ ಬುರ್ಜಿ ಖಾನಸಾಹೇಬರವರಲ್ಲಿ ಮಲ್ಲಿಕಾರ್ಜುನರು ವಿಶೇಷ ಶಿಕ್ಷಣಕ್ಕಾಗಿ ಹೋಗುತ್ತಿರುತ್ತಾರೆ.

ಕನ್ನಡಿಗರ ಆಶೆ ಆಶಯಗಳನ್ನು ಮಲ್ಲಿಕಾರ್ಜುನರು ಪೂರ್ಣವಾಗಿ ಗೌರವಿಸುತ್ತಿದ್ದಾರೆ. ನಾಲ್ಕೆಂಟು ವಚನಗಳನ್ನು ಹಾಡುತ್ತಿದ್ದವರು ಇಂದು ೪೦-೫೦ ವಚನಗಳನ್ನು ಹಾಡುತ್ತಾರೆ. ಹರಿಹರನ ಶರಣರಗಳೆ - ಪುಷ್ಪರಗಳೆಗಳಿಂದ ಸೊಗಸಾದ ಭಾಗಗಳನ್ನು ಎತ್ತಿಕೊಂಡು ಹಾಡುತ್ತಾರೆ.

ಎರಡು ವರ್ಷಗಳ ಹಿಂದೆ ಈ ವಿದ್ವನ್ಮಣಿಯನ್ನು ಸನ್ಮಾನಿಸಲು ಕನ್ನಡ ಕಲಾಭಿಮಾನಿಗಳು ಧಾರವಾಡದ ರೀಗಲ್ ಸಿನೀಮಾ ಮಂದಿರದಲ್ಲಿ ಸಭೆ ಕೂಡಿಸಿ ೩೫೦೦ ರೂ.ಗಳ ನಿಧಿಯನ್ನು ಅರ್ಪಿಸಿದರು. ಅಂದು ಅಧ್ಯಕ್ಷತೆ ವಹಿಸಿ ಮಲ್ಲಿಕಾರ್ಜುನರ ವೈಭವವನ್ನು ನೋಡಿ ಸಂತೋಷ ಪಡುವ ಭಾಗ್ಯ ನನ್ನದಾಗಿತ್ತು. ಉತ್ತರಕರ್ನಾಟಕದ ಜನ ಮಲ್ಲಿಕಾರ್ಜುನರನ್ನು ಬಹುವಾಗಿ ಆದರಿಸುತ್ತಿದ್ದಾರೆ.

ಕಳೆದವರ್ಷ ಮೈಸೂರು 'ಆಕಾಶವಾಣಿ'ಯ ಅಧಿಕಾರಿಗಳು ಮಲ್ಲಿಕಾರ್ಜುನರನ್ನು ಬರಮಾಡಿಕೊಂಡು ಅವರ ಗಾಯನ ಕೇಳುವ ಅವಕಾಶವನ್ನು ಮೈಸೂರು ರಸಿಕರಿಗೆ ತಂದುಕೊಟ್ಟರು. ಅದೇ ಸಂದರ್ಭದಲ್ಲಿ ಮಲ್ಲಿಕಾರ್ಜುನರು 'ರಾಮಮಂದಿರ'ದಲ್ಲಿ ಹಾಡಿ ವಿದ್ವಜ್ಜನರ ಪ್ರೇಮ ಗೌರವಗಳನ್ನು ದೊರಕಿಸಿಕೊಂಡರು.

ಮಹಾರಾಷ್ಟ್ರ, ಮಧ್ಯಹಿಂದೂಸ್ಥಾನ, ಉತ್ತರಹಿಂದೂಸ್ಥಾನದ ಕೇಂದ್ರಗಳಲ್ಲಿ ಕಛೇರಿ ಮಾಡಿ ಮಲ್ಲಿಕಾರ್ಜುನರು 'ಕನ್ನಡದ ಜಯಭೇರಿ' ಹೊಡೆದು ಬಂದಿದ್ದಾರೆ. 'ಕನ್ನಡದ ರಾಯಭಾರಿ' ಗಳಾಗಿ ಇವರು ಮಾಡುತ್ತಿರುವ ಉತ್ಕೃಷ್ಟ ಸೇವೆ ಇತರ ಕನ್ನಡ ಕಲಾವಿದರಿಗೆ ಮಾದರಿಯಾಗಲಿ.

೨೧ – ೩ – ೧೯೪೬

---

# ೨. ಸಂಗೀತವಿದ್ವಾನ್ ಡಿ. ಸುಬ್ಬರಾಮಯ್ಯ

ಒಮ್ಮೆ ಶ್ರೀರಂಗದ ಗಾಯನ ಸಮಾಜದಲ್ಲಿ ಒಬ್ಬ ತರುಣ ಗಾಯಕನ ಗಾಯನವೇರ್ಪಟ್ಟಿತ್ತು. ಗಾಯಕನೂ ಉತ್ಸಾಹದಿಂದಲೇ ಹಾಡಲಾರಂಭಿಸಿದ. ಆದರೆ ಶ್ರುತಿ ಸೇರದು, ಸ್ವರಗಳು ಮುರಿದು ಮುರಿದು ಬೀಳುತ್ತವೆ, ಮನೋಧರ್ಮ ಮೂಡಲೇ ಒಲ್ಲದು. ತನಗೂ ಸಂಗೀತಕ್ಕೂ ಬಹಳ ದೂರವೆಂದು ಗಾಯಕ ಭಾವಿಸಿ, ಮಾರನೆಯ ದಿವಸ ತಿರುವಯ್ಯಾರಿನ ಕಛೇರಿ ಮುಗಿಸಿ ಸಂಗೀತಕ್ಕೆ ಶರಣುಹೊಡೆಯುವುದೇ ಯೋಗ್ಯವೆಂದು ನಿಶ್ಚಯಿಸುತ್ತಾನೆ. ಮಾರನೆಯ ದಿನ ತಿರುವಯ್ಯಾರಿನಲ್ಲಿ ಶ್ರೀ ತ್ಯಾಗರಾಜರ ಸಮಾಧಿಯ ಮುಂದೆ ಕಛೇರಿ. ಗಾಯಕ ಅಪೂರ್ವ ಕಳೆತುಂಬಿ ಹಾಡುತ್ತಾನೆ. ಸಂಗೀತದ ಜೀವ ಎದ್ದು ಕಾಣುತ್ತದೆ. ಗಾಯಕನ ಹೃದಯದಲ್ಲಿ ಹೊಸ ಸತ್ಯ ಹೊಳೆಯುತ್ತದೆ. ಸಂಗೀತಕ್ಕೆ ಜನ್ಮವನ್ನು ಮೀಸಲುಮಾಡಲು ನಿಶ್ಚಯಿಸುತ್ತಾನೆ. ಆ ಗಾಯಕನೇ ಬೆಂಗಳೂರಿನ ಡಿ. ಸುಬ್ಬರಾಮಯ್ಯ. ಶ್ರೀರಂಗದ ಅನುಭವದಿಂದ ಸಂಗೀತವನ್ನು ಅವರು ತ್ಯಜಿಸಿಬಿಟ್ಟಿದ್ದರೆ ಕಲಾಭಿಮಾನಿಗಳಿಗೂ, ಕನ್ನಡನಾಡಿಗೂ ಎಂತಹ ನಷ್ಟವಾಗುತ್ತಿದ್ದಿತೆಂಬುದು ಅವರ ಸಂಗೀತವನ್ನು ಕೇಳಿರುವವರೆಲ್ಲರೂ ಬಲ್ಲರು.

ಸುಬ್ಬರಾಮಯ್ಯನವರಿಗೆ ಸಂಗೀತ ರಕ್ತದಲ್ಲಿಯೇ ಬಂದಿದೆ. ಅವರ ತಂದೆ ಪಿಟೀಲು ದಾಸಪ್ಪನೆಂಬವರು ಚಂದಣ್ಣನವರ (ಈಗ ಗುಬ್ಬಿ ವೀರಣ್ಣನವರ ಯಾಜಮಾನ್ಯದಲ್ಲಿರುವ) ನಾಟಕದ ಕಂಪೆನಿಯಲ್ಲಿ ಸಂಗೀತಬೋಧಕರಾಗಿದ್ದರು. ಅವರ ಚಿಕ್ಕಪ್ಪ ಪುಟ್ಟಣ್ಣನವರು ಒಂದು ಶಾಲೆಯಲ್ಲಿ ಸಂಗೀತದ

ಉಪಾಧ್ಯಾಯರಾಗಿದ್ದರು. ಸುಬ್ಬರಾಮಯ್ಯನವರಿಗೆ ಪುಟ್ಟಣ್ಣನವರೇ ಗುರುಗಳು. ಅವರ ಏಳನೆಯ ವರ್ಷದಿಂದ ಹನ್ನೆರಡನೆಯ ವಯಸ್ಸಿನವರೆಗೆ ಪುಟ್ಟಣ್ಣನವರು ಪ್ರಾಥಮಿಕ ಶಿಕ್ಷಣವನ್ನು ಪೂರೈಸಿ ಅಸ್ತಿಭಾರವನ್ನು ಹಾಕಿದರು. ಸುಬ್ಬರಾಮಯ್ಯನವರಿಗೆ ಆ ವಯಸ್ಸಿಗೇ ಸ್ವರಜ್ಞಾನವಿದ್ದುದರಿಂದ ವಯೋಧರ್ಮಕ್ಕೆ ಮೀರಿದ ಜ್ಞಾನ ಲಭ್ಯವಾಯಿತು. ಆದರೆ ಆಗ ಸಂಗೀತಕ್ಕೆ ಬೆಲೆಯೂ ಇರಲಿಲ್ಲ, ಮರ್ಯಾದೆಯೂ ಇರಲಿಲ್ಲ. ಇಂಗ್ಲೀಷು ಓದಿ 'ಚಾಕರಿ' ಮಾಡಲೆಂದು ಸುಬ್ಬರಾಮಯ್ಯನವರನ್ನು ಅವರ ಹಿರಿಯರು ಇಂಗ್ಲೀಷು ಶಾಲೆಗೆ ಹಾಕಿದರು. ಆ ವೇಳೆಗೆ ಕನ್ನಡ ಲೋವರ್ ಸೆಕಂಡರಿಯಲ್ಲಿ ತೇರ್ಗಡೆಯಾಗಿದ್ದುದರಿಂದ ಎರಡು ವರ್ಷಗಳಲ್ಲಿ ಇಂಗ್ಲೀಷು ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ, ಹೈಸ್ಕೂಲು ಶಿಕ್ಷಣಕ್ಕೆ ಬೆಂಗಳೂರಿಗೆ ಬಂದರು. ಬೆಂಗಳೂರಿನ ಕಲಾಮಯ ವಾತಾವರಣ, ತಮಗೆ ಆಗಾಗ್ಗೆ ಹಾಡಲು ದೊರೆಯುತ್ತಿದ್ದ ಅವಕಾಶಗಳು ಸುಪ್ತವಾಗಿದ್ದ ಕಲಾಚೇತನವನ್ನು ಜಾಗೃತಗೊಳಿಸಿದವು. ಸಂಗೀತವನ್ನು ಹಾಡಿಕೊಳ್ಳುವುದು, ಪ್ರಸಿದ್ಧ ವಿದ್ವಾಂಸರ ಕಛೇರಿಗಳಿಗೆ ಹೋಗಿ ಅವರ ಸಂಗೀತವನ್ನು ಲಾಲಿಸುವುದು, ಅವುಗಳನ್ನು ಅನುಕರಿಸುವುದು ಹೆಚ್ಚಾಯಿತು. ಹಾಗೂ ಹೀಗೂ ಎಸ್. ಎಸ್. ಎಲ್. ಸಿ. ಪರೀಕ್ಷೆ ಮುಗಿಸಿಕೊಂಡು ಸುಬ್ಬರಾಮಯ್ಯನವರು ಮದರಾಸಿಗೆ ಹೋಗಿಬಿಟ್ಟರು. ಅಲ್ಲಿನ ಸಂಗೀತ ಸಂಪರ್ಕ ಹೆಚ್ಚು ಧೈರ್ಯವನ್ನೂ ಆಸೆಯನ್ನೂ ಹುಟ್ಟಿಸಿದವು. ಮಾರನೆಯ ವರ್ಷವೇ ಒಂದು ಪ್ರವಾಸವನ್ನು ಆರಂಭಿಸಿ ಬಳ್ಳಾರಿ, ಅನಂತಪುರ ಮೊದಲಾದ ಸ್ಥಳಗಳಲ್ಲಿ ಕಛೇರಿಮಾಡಿ ಬಂದರು. ರಾಜಸ್ಥಾನದಲ್ಲಿ ಹಾಡಬೇಕೆಂಬ ಹಂಬಲ ಬಲವಾಯಿತು. ವೈಣಿಕಶಿಖಾಮಣಿ ಶೇಷಣ್ಣನವರ ಮುಂದೆ ಒಂದು ಕಛೇರಿಮಾಡಿ 'ಭಲೆ'ಯೆನಿಸಿಕೊಂಡರು. ಮಾರನೆಯ ದಿವಸ ಮತ್ತೆ ಶೇಷಣ್ಣನವರ ಮುಂದೆ ಹಾಡಿದಾಗ ಅವರು ನಯವಾಗಿ 'ದೊಡ್ಡ ಸ್ಥಾನಗಳಲ್ಲಿ ಈಗಲೇ ಹಾಡುವುದು ಬೇಡಪ್ಪಾ, ಇನ್ನೂ ಸ್ವಲ್ಪ ಬಂಡವಾಳ ಹೆಚ್ಚಲಿ' ಎಂದು ಉಪದೇಶಿಸಿದರು. ತನ್ನ ವಿದ್ಯೆಯಲ್ಲಿ ಪಾರಂಗತನಾಗಬೇಕೆಂಬ ಹಟ ಗಾಯಕನಲ್ಲಿ ಮೂಡಿತು. ಸಂಸಾರತಾಪತ್ರಯದ ಗೊಂದಲಕ್ಕೆ ಸಿಲುಕಿ ಉಪಾಧ್ಯಾಯರಾಗಿ ಕೆಲಸಕ್ಕೆ ಸೇರಿದರು. ಆದು ಮನಸ್ಸಿಗೆ ಒಗ್ಗದೆ

ಒಂದು ವರ್ಷದೊಳಗಾಗಿ ಕೆಲಸಕ್ಕೆ ನಮಸ್ಕಾರಹಾಕಿಬಿಟ್ಟರು. ಮೂರನೆಯ ವರ್ಷ ಗ್ರಾಮಫೋನಿಗೆ ಆರು ರಿಕಾರ್ಡುಗಳನ್ನು ಕೊಡುವ ಅವಕಾಶ ದೊರೆಯಿತು. ಸುಬ್ಬರಾಮಯ್ಯನವರು ಮೃದುಮಧುರವಾಗಿ ಕನ್ನಡ ದೇವರನಾಮಗಳನ್ನು ಹಾಡಿ ಸಂಗೀತಪ್ರೇಮಿಗಳ ಚಿತ್ತವನ್ನು ಸೆಳೆದರು. ಸುಬ್ಬರಾಮಯ್ಯನವರಿಗೆ ಎಲ್ಲ ಕಡೆಯಿಂದಲೂ ಆಹ್ವಾನಗಳು ಬರಲಾರಂಭ ವಾದವು. ಹೈದರಾಬಾದ್, ಗದ್ವಾಲ್, ಆಂಧ್ರದೇಶ, ತಮಿಳುನಾಡು ಮೊದಲಾದ ಕಡೆಗಳಲ್ಲೆಲ್ಲಾ ಸಂಚರಿಸಿ, ಕನ್ನಡ ಸಂಗೀತದ ಕಸ್ತೂರಿ ಪರಿಮಳವನ್ನು ಹರಡಿ ಬಂದರು. ೧೯೩೦ ರಲ್ಲಿ ಮತ್ತೆ ಕೆಲವು ಗ್ರಾಮಾ ಫೋನ್ ರಿಕಾರ್ಡುಗಳನ್ನಿತ್ತು ತ್ಯಾಗರಾಜಾದಿ ಕೀರ್ತನಕಾರರ ಕೀರ್ತನ ಗಳನ್ನು ಹಾಡಿದರು. ಅಲ್ಲಿಂದ ಕಲ್ಕತ್ತೆಗೆ ತೆರಳಿ ಸರ್ ಸಿ. ವಿ. ರಾಮನ್ ಅವರ ಸಮ್ಮುಖದಲ್ಲಿ ಅವರ ವಿಜ್ಞಾನ ಪ್ರಯೋಗಶಾಲೆಯಲ್ಲಿ ಹಾಡಿ ವಿಶೇಷ ಮರ್ಯಾದೆಯನ್ನು ಪಡೆದು ಬಂದರು. ಮತ್ತೆ ಆಂಧ್ರ, ತಮಿಳುನಾಡು ಗಳನ್ನು ಸಂಚರಿಸಿ, ಆ ದೇಶಗಳಲ್ಲಿ ತಮ್ಮ ಹೆಸರನ್ನು ಮನೆಯಮಾತನ್ನಾಗಿ ಮಾಡಿ ಬಂದರು. ಅದೇ ವರ್ಷ ಆಳುವ ಮಹಾಸ್ವಾಮಿಯವರ ಮುಂದೆ ಹಾಡುವ ಅವಕಾಶ ಸಿಕ್ಕಿತು. ಅಲ್ಲಿಂದ ನಾಲ್ಕುಸಲ ಸುಬ್ಬರಾಮಯ್ಯ ನವರನ್ನು ಕರಸಿಕೊಂಡು ಆಳುವ ಮಹಾಸ್ವಾಮಿಯವರು ಅವರ ಸಂಗೀತ ವನ್ನು ಕೇಳಿ, ಆನಂದಿಸಿ ಪುರಸ್ಕರಿಸಿದ್ದಾರೆ. ಕನ್ನಡ ಕಲೆಗಳ ಪುರಸ್ಕರ್ತರೂ ಸ್ವಯಂ ಗಾಯನವಾದನ ನಿಪುಣರೂ ಆದ ಮಹಾಸ್ವಾಮಿಯವರ ಮೆಚ್ಚುಗೆ ಯನ್ನು ನಾಲ್ಕುಸಲ ಸಂಪಾದಿಸಿರುವುದು ಸುಬ್ಬರಾಮಯ್ಯನವರ ಕಲಾ ಪ್ರತಿಭೆ ವಿದ್ವತ್ತುಗಳ ಹೆಚ್ಚುಗಾರಿಕೆಯನ್ನು ತೋರುತ್ತದೆ.

ಸುಬ್ಬರಾಮಯ್ಯನವರಿಗೆ ಅಪರೂಪವಾದ ಭಾಷಾಂಗ ರಾಗಗಳ ಮೇಲೆ ಪ್ರೀತಿ ಹೆಚ್ಚು. ಹುಸೇನಿ, ನೀಲಾಂಬರಿ, ಕನ್ನಡ, ಸಾರಂಗ, ಅಸಾವೇರಿ ಮೊದಲಾದ ರಾಗಗಳನ್ನು ಅವರ ಬಾಯಲ್ಲೇ ಕೇಳಬೇಕು. ಸಾಧಾರಣ ವಾಗಿ ಬಳಕೆಯಲ್ಲಿರುವ ದರ್ಬಾರಿ, ಕೇದಾರಗೌಳ, ಬೇಗಡೆ, ತೋಡಿ, ಭೈರವಿ ಮೊದಲಾದ ರಾಗಗಳನ್ನು ಹಾಡುವಾಗಲೂ ತಮ್ಮ ವೈಯಕ್ತಿಕ ಶ್ರೇಷ್ಠತೆಯನ್ನು ತೋರುತ್ತಾರೆ. ರಾಗಾಲಾಪನೆಯಲ್ಲಾಗಲಿ ಪಲ್ಲವಿ ಯಲ್ಲಾಗಲಿ ಶ್ರೀಯುತರು ಭಾವದ ಕಡೆಗೆ ಹೆಚ್ಚು ಲಕ್ಷ್ಯಕೊಡುತ್ತಾರೆ.

ಠೇಂಕಾರದ ಎದುರಾಳಿ ಪಿಟೀಲಿಗೋ ಮೃದಂಗಕ್ಕೋ ಪಕ್ಕದಲ್ಲಿ ಕುಳಿತರೆ ತಮ್ಮ 'ಕೈವಾಡ'ವನ್ನು ತೋರಿಸದೆ ಬಿಡುವುದಿಲ್ಲ. ಸ್ವರಪ್ರಸ್ತಾರದಲ್ಲಿ ತೀವ್ರಕಾಲದ ಸ್ವರಪ್ರಸ್ತಾರದ 'ಸರ್ಕಸ್ಸಿ'ನ ಮೇಲೆ ಶ್ರೀಯುತರಿಗೆ ಹೆಚ್ಚು ಪ್ರೇಮವಿಲ್ಲ. ಇವರ ಶಾರೀರ ಶ್ರುತಿಬದ್ಧವಾಗಿ ವಿಸ್ತಾರಕ್ಕೆ ಒಗ್ಗುವ ಏರಿಳಿತಗಳನ್ನುಳ್ಳದ್ದಾಗಿದೆ. ಶ್ರುತಿಯ ಕಡೆಗೆ ಲಕ್ಷ್ಯವನ್ನು ಕಡಮೆಮಾಡಿ ನಮ್ಮ ಗಾಯಕರು ಕರ್ನಾಟಕ ಸಂಗೀತವನ್ನು ಅಧೋಗತಿಗಿಳಿಸಿದರೆಂದು ಶ್ರೀಯುತರ ನಂಬಿಕೆ. ಹಾರ್ಮೋನಿಯಂ ವಾದ್ಯವೆಂದರಂತೂ ತಲೆಬೇಸರ.

ಸುಬ್ಬರಾಮಯ್ಯನವರಿಗೆ ಈಗ ಮೂವತ್ತೈದನೆಯ ವಯಸ್ಸು ನಡೆಯುತ್ತಿದೆ. ಕರ್ನಾಟಕ ಸಂಗೀತವನ್ನು ಬೆಳಸಬೇಕೆಂಬ ಅಪಾರ ಆಶಯ ಇವರ ಹೃದಯದಲ್ಲಿ ತುಂಬಿ ತುಳುಕುತ್ತಿದೆ. ತ್ಯಾಗರಾಜ, ದೀಕ್ಷಿತರ ಕೀರ್ತನೆಗಳಂತೆ ಕನ್ನಡದಲ್ಲಿ ಹೊಸ ಕೀರ್ತನೆಗಳು ಬರಬೇಕೆಂದು ಬಯಸುತ್ತಾರೆ. ತಮಿಳರಂತೆ ಹಟಕ್ಕೆ ಬಿದ್ದಾದರೂ ತಮ್ಮ ಭಾಷೆಯ ಕೀರ್ತನೆಗಳನ್ನೇ ಕನ್ನಡಿಗರು ಕೇಳಬೇಕೆಂದು ಬಯಸುತ್ತಾರೆ. ಕನ್ನಡ ಕೀರ್ತನೆಗಳ ಪ್ರಸಾರಕ್ಕೆ ಇವರು ಅಮೋಘವಾದ ಸೇವೆಯನ್ನು ಮಾಡಿದ್ದಾರೆ. ಕನ್ನಡ ಸಾಹಿತ್ಯ ಸಂಗೀತಗಳ ಉತ್ಕಟ ಪ್ರೇಮಿಗಳಾದ ಇವರು ಅರಿಯಾಕುಡಿ ರಾಮಾನುಜ ಅಯ್ಯಂಗಾರ್ಯರ ಗಾನಮಾಧುರ್ಯ, ಮುತ್ತಯ್ಯ ಭಾಗವತರ ಅಮೋಘವಾದ ಪಾಂಡಿತ್ಯ, ಹಿಂದೂಸ್ಥಾನಿ ಗಾಯಕರ ಶ್ರುತಿಪ್ರಾಧಾನ್ಯಗಳನ್ನು ಹೃತ್ಪೂರ್ವಕವಾಗಿ ಮೆಚ್ಚುತ್ತಾರೆ. ತಮ್ಮ ಸಹೋದ್ಯೋಗಿಗಳ ಗುಣವನ್ನು ಮೆಚ್ಚುವ ಔದಾರ್ಯವೂ, ಅಂತಃಕರಣಪೂರ್ವಕವಾಗಿ ವಿಮರ್ಶೆಮಾಡುವ ಸಂಸ್ಕೃತಿಯೂ ಇವರಲ್ಲಿ ಇದೆ. ಕರ್ನಾಟಕಕ್ಕೆ ಒಂದು 'ಸಂಗೀತ ಪರಿಷತ್ತು' (Music Academy) ಆಗಬೇಕೆಂಬುದು ಇವರ ಹೆಬ್ಬಯಕೆಯಾಗಿದೆ. ಕರ್ನಾಟಕ ಸಂಗೀತಗಾರರು ತಮ್ಮ ಕಲಾಸಂಸ್ಕೃತಿಯನ್ನು ರಕ್ಷಿಸಿ ಬೆಳಸಿಕೊಳ್ಳುವ ಪ್ರಯತ್ನ ಮಾಡದಿದ್ದರೆ ಇಂದಿನ ಅಭಿರುಚಿಯ ಹೊಡೆತಕ್ಕೆ ಸಿಕ್ಕಿ ಅದು ನಶಿಸುವ ಸಂಭವವಿದೆಯೆಂದು ಶಂಕಿಸುತ್ತಾರೆ. ಒಬ್ಬ ವಿದ್ವಾಂಸರ ಸಂಗೀತದ ವಿಚಾರ ಪ್ರಸ್ತಾವಿಸುತ್ತಾ ಇವರೇ 'ಸಂಗೀತ ಶಾಸ್ತ್ರವೂ ಹೌದು, ಕಲೆಯೂ ಹೌದು. ಆದರೆ ಅದು ಹೆಚ್ಚು ರಸಾತ್ಮಕವಾದ ಶಾಸ್ತ್ರವಾಗಿದೆ. ಸಂಗೀತವಿದ್ಯೆ ಕಲಾಸ್ವರೂಪವನ್ನು

ಮನಗಾಣಲು ಪ್ರಯತ್ನಿಸದೆ ಕೇವಲ ನೀರಸವಾದ ಶಾಸ್ತ್ರಭಾಗದಿಂದ ಪಂಡಿತ ಪಾಮರ ರಂಜನೆಯನ್ನು ಮಾಡುವುದಾದರೂ ಕಷ್ಟಸಾಧ್ಯದ್ದಾಗಿದೆ' ಎನ್ನುವ ಮಾತಿನಲ್ಲಿ ಸಂಗೀತದ ಬಗ್ಗೆ ಇವರಿಗಿರುವ ದೊಡ್ಡ ದೃಷ್ಟಿ ವ್ಯಕ್ತವಾಗುತ್ತದೆ.

ಸುಬ್ಬರಾಮಯ್ಯನವರು ಸ್ವಯಂ ಮನೋಹರವಾಗಿ ಹಾಡಬಲ್ಲ ಕಲಾವಿದರು, ಜತೆಗೆ ಶಾಸ್ತ್ರದ ಪರಿಶ್ರಮವೂ ಇದೆ. ಕಲೆ, ಶಾಸ್ತ್ರಗಳ ಜತೆಗೆ ಕರ್ನಾಟಕದ ಮೇಲೆ ಅಭೂತಪೂರ್ವವಾದ ಅಭಿಮಾನವಿದೆ. ಇವರಿಂದ, ಮತ್ತು ಇಂತಹ ಕಿರಿಯ ವಿದ್ವಾಂಸರಿಂದ ನಾವು ಕನ್ನಡ ಕಲೆಗಳ 'ನವೋದಯ'ವನ್ನು ಆಶಿಸಬಹುದು. ೨೧-೧೦-೩೮.

## ತರುವಾಯ

ಶ್ರೀ ಸುಬ್ಬರಾಮಯ್ಯನವರು, ಈಚೆಗೆ ಎರಡು ಉತ್ಕೃಷ್ಟ ಕೆಲಸಗಳನ್ನು ನಿರ್ವಹಿಸಿದ್ದಾರೆ. ಮಕ್ಕಳಿಗೆ ಅಶಾಸ್ತ್ರೀಯವಾದ ಸಂಗೀತವನ್ನು ಮೊದಲೇ ಅರೆದೊಯ್ದು ಅವರ ಅಭಿರುಚಿಯನ್ನು ಹಾಳುಮಾಡುವ ಪರಿಪಾಠವನ್ನು ತಪ್ಪಿಸುವುದಕ್ಕೆ ಒಂದು ಶ್ರೇಷ್ಠ ತರಗತಿಯ ಸಂಗೀತ ಶಾಲೆ (ಕರ್ನಾಟಕ ಸಂಗೀತ ವಿದ್ಯಾಲಯ) ಯನ್ನು ತೆರೆದು ನೂರಾರು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಸಂಗೀತ ವಿದ್ಯಾದಾನಮಾಡುತ್ತಿದ್ದಾರೆ.

ಬೆಂಗಳೂರಿನಂತಹ ಮಹಾನಗರದಲ್ಲಿ ಕನ್ನಡ ಸಂಗೀತಗಾರರಿಗೆ ದೊರೆಯುತ್ತಿರುವ ತಾತ್ಸಾರಕ್ಕೆ ಮನನೊಂದು 'ಮೈಸೂರು ಸಂಗೀತ ಸಭಾ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಆ ಮೂಲಕ ಕನ್ನಡ ವಿದ್ವಾಂಸರಿಗೆ ನೆರವು ಪ್ರೋತ್ಸಾಹಗಳನ್ನು ನೀಡುತ್ತಿದ್ದಾರೆ.

ನಾನು 'ವಿಶ್ವವಾಣಿ' ಪತ್ರಿಕೆ ನಡೆಸುತ್ತಿದ್ದಾಗ (೧೯೩೬) ಅದರ ಸಂಗೀತ ವಿಭಾಗದ ಸಂಪಾದಕರಾಗಿ ಶ್ರೀ ಸುಬ್ಬರಾಮಯ್ಯನವರು ಉತ್ಕೃಷ್ಟ ಕೆಲಸವನ್ನು ನಿರ್ವಹಿಸಿದ್ದಾರೆ. ಹಲವು ದೇವರ ನಾಮಗಳಿಗೆ ಶಾಸ್ತ್ರೀಯವಾದ ಪ್ರಸ್ತಾರವನ್ನು ಹಾಕಿಕೊಟ್ಟು, ಮುಂದೆ ಆ ಕೆಲಸ ಕೈಗೊಂಡವರಿಗೆ ಮೇಲ್ಪಂಕ್ತಿ ತೋರಿಸಿಕೊಟ್ಟರು. ಅದೇ ಕೆಲಸವನ್ನು ಮುಂದುವರಿಸಿ ಕನ್ನಡ ಕೀರ್ತನೆಗಳ ಸಂಪ್ರದಾಯವನ್ನು ದೇಶದಲ್ಲಿ ಬೆಳಸಬೇಕೆಂದು ಸುಬ್ಬರಾಮಯ್ಯನವರ ಉತ್ಕಟೇಚ್ಛೆ. ೨೧-೩-೧೯೪೬.

# ೩. ವೈಣಿಕಪ್ರವೀಣ ವೆಂಕಟಗಿರಿಯಪ್ಪ

ವಿದ್ಯಾ, ವಿನಯ, ಔದಾರ್ಯ ಒಂದೆಡೆ ಸೇರುವುದು ವಿರಳ. ಕಲಾವಿದರು ಕಲಾವಿದರನ್ನು ಮೆಚ್ಚುವುದೂ, ಪ್ರೋತ್ಸಾಹಿಸುವುದೂ ತೀರಾ ವಿರಳ. ನಂಜನಗೂಡಿನಲ್ಲಿ ಸಂಗೀತ ಸಮ್ಮೇಳನ. ದೇವೇಂದ್ರಪ್ಪನವರ ಹಾಡುಗಾರಿಕೆ. ವೆಂಕಟಗಿರಿಯಪ್ಪನವರೂ ಶ್ರಾವಕರಲ್ಲಿ ಒಬ್ಬರು. ದೇವೇಂದ್ರಪ್ಪನವರ ಅಮೋಘವಾದ ಹಾಡುಗಾರಿಕೆಯನ್ನು ಕೇಳಿ ಹೃತ್ಪೂರ್ವಕವಾಗಿ ಮೆಚ್ಚಿ, ತಮ್ಮ ಕಿಸೆಯಲ್ಲಿದ್ದುದನ್ನು ತೆಗೆದು ಮರ್ಯಾದೆ ಮಾಡಿದರು. ಇನ್ನೊಂದುಸಲ, ಗುರುಶಾಂತಯ್ಯನೆಂಬೊಬ್ಬ ಅಂಧ ಗಾಯಕರು ಮೈಸೂರಿಗೆ ಬಂದಿದ್ದರು. ಅರಮನೆಯಲ್ಲಿ ಕಛೇರಿ ಮಾಡ ಬೇಕೆಂದು ಅವರ ಮಹದಾಶೆ. ಪ್ರಯತ್ನಗಳು ನಿಷ್ಫಲವಾಗುತ್ತ ಬಂದವು. ಆಗ ದೇವೇಂದ್ರಪ್ಪನವರು ವೆಂಕಟಗಿರಿಯಪ್ಪನವರಲ್ಲಿಗೆ ಅವರನ್ನು ಕರೆ ದೊಯ್ದು ಪರಿಚಯ ಮಾಡಿಕೊಟ್ಟರು. ಮೂರು ನಾಲ್ಕು ದಿವಸಗಳಲ್ಲಿಯೇ ಕಛೇರಿಯೂ ಆಯಿತು, ವಿದ್ವಾಂಸರಿಗೆ ಉಚಿತ ಮರ್ಯಾದೆಯೂ ಆಯಿತು.

ಸ್ವಪ್ರತಿಷ್ಠೆಯನ್ನು ಮರೆತು ವಿದ್ಯಾಭಿಮಾನವನ್ನು ತೋರುವ ಔದಾರ್ಯ, ವಿದ್ಯೆಯಲ್ಲಿ ಅನನ್ಯ ಭಕ್ತಿ, ಉತ್ತಮವಾದ ಜೀವನ, ನಡತೆಗಳು ಶ್ರೀ ವೆಂಕಟಗಿರಿಯಪ್ಪನವರ ಜೀವನದ ಹೆಗ್ಗುರುತುಗಳು. ಅವರಿಗಿರುವ ಸ್ಥಾನಮಾನಗಳಲ್ಲಿ ಯಾವ ಸೋಗು ಹಾಕಿದರೂ ನಡೆಯು ತ್ತದೆ. ಆದರೆ ಮಗುವಿನಂತಹ ಸರಳತೆ, ನಯವಿನಯ ತುಂಬಿದ ನಡವಳಿಕೆ ವೆಂಕಟಗಿರಿಯಪ್ಪನವರ ವ್ಯಕ್ತಿತ್ವವನ್ನು ನಿರ್ದೇಶಿಸುತ್ತವೆ.



ವೆಂಕಟಗಿರಿಯಪ್ಪ

[ಪುಟ ೧೬

ವೆಂಕಟಗಿರಿಯಪ್ಪನವರು ವೀಣೆಯ ಮನೆತನಕ್ಕೆ ಸೇರಿದವರು. ಐದು ತಲೆಮಾರುಗಳ ಹಿಂದಿನಿಂದ ಅವರ ಪೂರ್ವಿಕರು ಪ್ರಸಿದ್ಧ ವೈಣಿಕರು. ಅವರ ತಾತ ದೊಡ್ಡ ಸುಬ್ಬರಾಯರು ಮತ್ತು ಸೋದರಮಾವ ಚಿಕ್ಕ ಸುಬ್ಬರಾಯರು ಆಸ್ಥಾನದ ವೈಣಿಕ ವಿದ್ವಾಂಸರಾಗಿದ್ದರು. ಇವರಲ್ಲಿಯೇ ವೆಂಕಟಗಿರಿಯಪ್ಪನವರ ವೀಣಾವ್ಯಾಸಂಗ ಆರಂಭವಾದುದು. ಚಿಕ್ಕ ಸುಬ್ಬರಾಯರಲ್ಲಿ ಐದನೆಯ ವಯಸ್ಸಿನಿಂದ ಸುಮಾರು ಮೂವತ್ತು ವರ್ಷ ವೀಣೆ ಪಾಠವಾಯಿತು. ಸಂಗೀತ ಸಾಗರದಂತಿದ್ದ ಮನೆಯಲ್ಲಿ ಯೋಗ್ಯ ಗುರುವೂ ದೊರೆತಮೇಲೆ ವೆಂಕಟಗಿರಿಯಪ್ಪನವರ ವಿದ್ವತ್ತು ಪೂರ್ಣವಾಗದೆ ಏನು? ಮೊದಲಿನಿಂದಲೂ ವೀಣೆ ಶೇಷಣ್ಣನವರ ಪರಿಚಯ, ಬಳಕೆಯಿದ್ದುದರಿಂದ ಅವರ ಪ್ರಭಾವವೂ ತರುಣ ವಿದ್ವಾಂಸರಮೇಲೆ ಮೂಡಿತ್ತು. ಶೇಷಣ್ಣನವರ ವಾದ್ಯವಾದನವೇ ವೆಂಕಟಗಿರಿಯಪ್ಪನವರ ಗುರುವಾಯಿತು. ಅದರ ಕಳೆಯನ್ನು ತಮ್ಮ ವಾದ್ಯವಾದನದಲ್ಲಿ ತರಲು ಯತ್ನಿಸಿದರು. ಈ ರೀತಿಯಿಂದ ಶೇಷಣ್ಣನವರು ವೆಂಕಟಗಿರಿಯಪ್ಪನವರ ಗುರುಗಳಾದರು. ಒಂದು ಸಲ ಶೇಷಣ್ಣನವರನ್ನು ಹಿಂಬಾಲಿಸಿ ಅರಮನೆಯಲ್ಲಿ ಜತೆವೀಣೆ ನುಡಿಸುವ ಅವಕಾಶ ದೊರೆಯಿತು. ಆಗ ವೆಂಕಟಗಿರಿಯಪ್ಪನವರ ಕುಶಲ ಕಲೆಗಾರಿಕೆ ಮಹಾಪ್ರಭುಗಳ ಚಿತ್ತವನ್ನು ಸೆಳೆಯಿತು. ೧೯೧೮ ರಲ್ಲಿ ಅರಮನೆಯ ವೈಣಿಕ ವಿದ್ವಾಂಸ ಪದವಿ ವೆಂಕಟಗಿರಿಯಪ್ಪನವರಿಗೆ ಲಭಿಸಿತು.

ವೆಂಕಟಗಿರಿಯಪ್ಪನವರು ೧೯೧೬ರಿಂದ ಉತ್ತರ ದಕ್ಷಿಣ ಹಿಂದೂಸ್ಥಾನಗಳ ದಿಗ್ವಿಜಯವನ್ನಾರಂಭಿಸಿದರು. ಬೆಂಗಳೂರು, ಮದರಾಸು, ತಿರುವನಂತಪುರ, ಬೆಳಗಾಂವಿ, ಮುಂಬಯಿ, ಪುಣೆ, ಮಿರಜ್, ಸಾಂಗಲಿ, ಕೊಲ್ಹಾಪುರ ಮೊದಲಾದ ದೇಶಗಳನ್ನು ಸುತ್ತಿಬಂದರು. ತಿರುವನಂತಪುರದ ಅರಮನೆಯಲ್ಲಿ ಕಛೇರಿ ನಡೆಸಿ, ಆಳುವ ಸ್ವಾಮಿಯವರ ತೀರ್ಥರೂಪರವರಿಂದ ತೋಡಾವನ್ನು ಪಡೆದುಬಂದರು. ಪುಣೆಯಲ್ಲಿ ಕಲಾವಿದರಾದ ಸರ್ ಮುಜಂದಾರರು, ಕಲ್ಕತ್ತೆಯಲ್ಲಿ ಸರ್ ಸಿ. ವಿ. ರಾಮನ್‌ರವರು, ಕುಂಭಕೋಣದಲ್ಲಿ ಶ್ರೀ ಶ್ರೀಗಳವರು, ಪಾಂಡುಚೇರಿಯಲ್ಲಿ ಗೌರ್ನರ್ ಸಾಹೇಬರು, ವೆಂಕಟಗಿರಿಯಪ್ಪನವರ ವಿದ್ವತ್ತನ್ನು ಮನ್ನಿಸಿ ಅನೇಕ ಸನ್ಮಾನಗಳನ್ನು ಮಾಡಿದ್ದಾರೆ. ಪುಣೆಯ ಸರ್ ಮುಜಂದಾರರು

ವೆಂಕಟಗಿರಿಯಪ್ಪನವರ ವಾದ್ಯವಾದನವನ್ನು ವಿಶೇಷವಾಗಿ ಮೆಚ್ಚಿ ಅನೇಕ ದೊಡ್ಡ ದೊಡ್ಡ ಸ್ಥಳಗಳಲ್ಲಿ ಕಛೇರಿಗಳಾಗುವಂತೆ ವ್ಯವಸ್ಥೆಮಾಡಿದರು.

೧೯೩೯ ರಲ್ಲಿ ವೆಂಕಟಗಿರಿಯಪ್ಪನವರು ಕಲ್ಕತ್ತಗೆ ಹೋಗಿದ್ದಾಗ ಕವಿಗುರು ರವೀಂದ್ರರ ಮುಂದೆ ನುಡಿಸುವ ಅವಕಾಶ ದೊರೆಯಿತು. ರವೀಂದ್ರರು ದೇಹಾಲಸ್ಯದಿಂದ ವಿಶ್ರಾಂತಿಗಾಗಿ ಇಟಲಿಗೆ ಹೊರಡಲು ಸಿದ್ಧರಾಗಿದ್ದರೂ ವೆಂಕಟಗಿರಿಯಪ್ಪನವರನ್ನು ಕರೆಸಿ ಮೂರು ಗಂಟೆಗಳ ಕಾಲ ಅವರ ಸಂಗೀತವನ್ನು ಕೇಳಿ, ಆನಂದದ ಭರದಲ್ಲಿ ತಾವೂ ಹಾಡ ಲಾರಂಭಿಸಿದರು. ವೆಂಕಟಗಿರಿಯಪ್ಪನವರ ವಾದನವನ್ನು ವಿಶೇಷವಾಗಿ ಶ್ಲಾಘಿಸಿ, ಶಾಂತಿನಿಕೇತನಕ್ಕೆ ಬರಬೇಕೆಂದು ಆಮಂತ್ರಣವನ್ನಿತ್ತರು.

ವೆಂಕಟಗಿರಿಯಪ್ಪನವರ ಖ್ಯಾತಿ ಅಖಿಲ ಭಾರತದಲ್ಲಿ ಪ್ರಚಾರ ವಾಯಿತು. ಎಲ್ಲೆಡೆಗಳಿಂದಲೂ ಆಹ್ವಾನಗಳು ಬರಲಾರಂಭಿಸಿದವು. ದಕ್ಷಿಣಾದಿ ಸಂಗೀತವು ಉತ್ತರದವರಿಗೆ ಹಿಡಿಸುವುದಿಲ್ಲ - ರುಚಿಸುವುದಿಲ್ಲ ಎಂಬ ಮೂಢನಂಬಿಕೆ ಹೋಗಲವಕಾಶವಾಯಿತು. ಸಂಗೀತ ವಿಶ್ವವಾಣಿ. ಅದು ಹೃದಯದಿಂದ ಬಂದರೆ ಹೃದಯಕ್ಕೆ ಮುಟ್ಟಲೇಬೇಕೆಂಬ ತತ್ವಕ್ಕೆ ವೆಂಕಟಗಿರಿಯಪ್ಪನವರ ಪ್ರವಾಸದಿಂದ ಇಂಬು ದೊರಕಿತು. ಕುಂಭ ಕೋಣದ ಶ್ರೀಶಂಕರಪೀಠವ ಜಗದ್ಗುರುಗಳವರು ೧೯೨೪ ರಲ್ಲಿ ಮೈಸೂರಿನಲ್ಲಿ ದೊಡ್ಡ ಸಭೆ ಸೇರಿಸಿ ಉಚಿತ ಮರ್ಯಾದೆಗಳೊಡನೆ ವೈಣಿಕಪ್ರವೀಣ ಸುಬ್ಬಣ್ಣ ನವರ ಕೈಯಿಂದ ' ವೈಣಿಕ ಶಿಖಾಮಣಿ ' ಎಂಬ ಬಿರುದನ್ನು ಕೊಡಿಸಿದರು. ೧೯೩೬ ರಲ್ಲಿ ಆಳುವ ಮಹಾಸ್ವಾಮಿಯವರು ಯಥೋಚಿತವಾದ ಸನ್ಮಾನ ಗಳೊಂದಿಗೆ ವಿಜಯದಶಮಿ ದರ್ಬಾರಿನಲ್ಲಿ ' ವೈಣಿಕ ಪ್ರವೀಣ ' ಎಂಬ ಬಿರುದನ್ನು ದಯಪಾಲಿಸಿದರು.

ಅರಮನೆ, ಗುರುಮನೆ, ಜನಮನೆ, ಕಲೆಯ ನೆಲಮನೆಗಳೆಲ್ಲದರ ಆದರ ಗೌರವಗಳಿಗೆ ಪಾತ್ರರಾಗುವುದಕ್ಕೆ ವೆಂಕಟಗಿರಿಯಪ್ಪನವರ ವಾದನ ದಲ್ಲಿರುವ ನಿ ಪು ಣ ತೆ ಯೇ ಕಾರಣ. ಅವರ ವಾದ್ಯ ಚೇತೋಹಾರಿ; ಸ್ವರತಾನಗಳು ತುಂಬಿಬರುತ್ತವೆ. ತಾವೇ ಭುವನಗಾಂಧಾರಿ, ಧರ್ಮವತಿ, ವಾಗಧೀಶ್ವರಿ, ಸೂರ್ಯಕಾಂತ, ಪಶುಪತಿಪ್ರಿಯ ಮೊದಲಾದ ಅಪರೂಪ ರಾಗಗಳಲ್ಲಿ ರಚಿಸಿರುವ ಕೀರ್ತನೆಗಳನ್ನು ನುಡಿಸುವಾಗ ಅಪೂರ್ವ ಕಲಾ

ವಿದಗ್ಧತೆಯನ್ನು ತೋರುತ್ತಾರೆ. ಹೊಸ ರಾಗನಿರ್ಮಾಣ, ಹೊಸ ಪ್ರಯೋಗಗಳ ಕಡೆಗೆ ಲಕ್ಷ್ಯ ಬಹಳ. ಇವರು ಈಚೆಗೆ ಪ್ರಕಟಿಸಿರುವ "ಸಂಗೀತಾಮೃತಸಾರ" ಎಂಬ ಗ್ರಂಥ ಅವರ ವಿದ್ಯಾ ಕಲೆಗಳ ದ್ಯೋತಕವಾಗಿದೆ. ಕೀರ್ತನೆಗಳಿಗೆ ಅರ್ಥ, ರಾಗದ ಇತಿಹಾಸಗಳ (ಆರೋಹ ಅವರೋಹಾದಿಗಳು) ನ್ನಿತ್ತು ಹಾಡುವವರು ಹೆಚ್ಚು ಮನೋಧರ್ಮವನ್ನು ಪ್ರದರ್ಶಿಸಬೇಕೆಂದು ವೆಂಕಟಗಿರಿಯಪ್ಪನವರು ಇಚ್ಛಿಸಿರುವುದು ಅವರ ಸೂಕ್ಷ್ಮ ಕಲಾಭಿಜ್ಞತೆಯ ಕುರುಹಾಗಿದೆ.

ಆಳುವ ಮಹಾಸ್ವಾಮಿಯವರಲ್ಲಿ ಶ್ರೀಯುತರಿಗಿರುವ ಅನನ್ಯವಾದ ರಾಜಭಕ್ತಿ, ಉತ್ತಮ ಸಂಗೀತ ಪ್ರಸಾರದ ಕಡೆಗಿರುವ ಲಕ್ಷ್ಯ, ಕನ್ನಡ ಸಂಗೀತಕ್ಕೆ ಮಹೋನ್ನತ ಸ್ಥಾನವನ್ನು ಕಲ್ಪಿಸಬೇಕೆಂಬ ಮಹದಾಶೆ ಅವರ ಜೀವನ, ವಿದ್ವತ್ತಿನ ಅಸ್ತಿಭಾರಗಳಾಗಿವೆ. ಶ್ರೀಯುತರೂ, ಇತರ ವಿದ್ವಾಂಸರೂ ಕನ್ನಡ ಕೀರ್ತನೆಗಳನ್ನೇ ಹೆಚ್ಚು ಹೆಚ್ಚು ಪ್ರಸಾರಕ್ಕೆ ತರಬೇಕು. ಇಂದು ಸಂಗೀತಪ್ರಪಂಚವನ್ನು ಆಕ್ರಮಿಸಿರುವ ತೆಲುಗು ಕೀರ್ತನೆಗಳ ಸರ್ವಾಧಿಕಾರವನ್ನು ತಗ್ಗಿಸಬೇಕು.

ಆಳುವ ಮಹಾಸ್ವಾಮಿಯವರ ಕೃಪಾವಿಶೇಷದಿಂದ ವೆಂಕಟಗಿರಿಯಪ್ಪನವರಿಗೆ ಇಂಗ್ಲೀಷ್ ಸಂಗೀತದ ಪರಿಶ್ರಮವೂ ಆಗಿದೆ. ಕರ್ನಾಟಕ ಸಂಗೀತವನ್ನು ಪ್ರಚಾರಮಾಡಲು ಅನುಕೂಲಿಸುವಂತೆ ಇಂಗ್ಲೀಷ್ ನೊಟೇಷನ್ ಹಾಕುವ ಸುಧಾರಣೆ ಸಾಧ್ಯವಾಗಿದೆ. ಇದು ಮೇಳ ಸಂಗೀತದ (Orchestral Music) ಪ್ರಸಾರಕ್ಕೆ ತುಂಬ ಅನುಕೂಲವಾಗುವುದರಲ್ಲಿ ಸಂದೇಹವಿಲ್ಲ.

ವೆಂಕಟಗಿರಿಯಪ್ಪನವರಂತಹ ವಿದ್ವಾಂಸರಿಂದ ಹೆಚ್ಚು ಸೇವೆಯನ್ನು ಸ್ವೀಕರಿಸಿ, ಕನ್ನಡ ಕಲೆಗಳ ಪುನರುದ್ಧಾರ ಕಾರ್ಯವನ್ನು ಅವರಿಂದ ಮಾಡಿಸಬೇಕಾದುದು ಕನ್ನಡಿಗರ ಕರ್ತವ್ಯ.

೧೬ – ೧೨ – ೧೯೩೮

———

## ೪. ಚಿತ್ರಗಾರ ಕಮಡೋಳಿ

"—ಪ್ರಕೃತಿನೋಟ ಚಿತ್ರಿಸುವ ಚಿತ್ರಕಾರ ಕೇವಲ ಅದರ ಬಾಹ್ಯ ರೂಪನ್ನು ಮಾತ್ರ ಕಾಣಿಸುವುದಕ್ಕೆ ಯತ್ನಿಸುವುದಿಲ್ಲ. ಅದರ ಬಗ್ಗೆ 'ಏನಾದರೂ ಹೇಳಬೇಕೆಂದು' ಬಯಸುತ್ತಾನೆ. ಆ 'ಏನಾದರೂ' ಅವನೊಂದಿಗೆ ನಾವು ಅನುಭವಿಸುವ ರಸವಾಗಿರಬಹುದು, ಭಾವನೆಯಾಗಿರಬಹುದು – ಆದರೆ ಅನೇಕಸಲ ಅದು ಚಿತ್ರಗಾರನ ಪ್ರತಿಭೆಯನ್ನನುಸರಿಸಿದ ನೂತನ ಶೋಧನೆಯಾಗಿರುತ್ತದೆ. ಆ ಶೋಧನೆ ನೂತನವೂ ಸ್ವತಂತ್ರವೂ ಆಗಿದ್ದಷ್ಟೂ ಅವನಿಗೆ ನಾವು ಬೆಲೆ ಕೊಡುತ್ತೇವೆ. ಪ್ರತಿಭೆಯ ಜತೆಗೆ ಭಾವನೆಯನ್ನು ರೂಪಿಸಬಲ್ಲ ತಂತ್ರಕೌಶಲ್ಯವೂ ಅಗತ್ಯವಾಗಿರಬೇಕಷ್ಟೆ."

—Herbert Read in 'Meaning ART.'

ಪ್ರಕೃತಿ ತಾಪಸಿ, ರೂಪಸಿ. ಆಕೆ, ಸಂಯಮಶೀಲೆ. ತನ್ನ ಚಿರ ವಿನೂತನ ರಾಗರಮಣೀಯತೆಯನ್ನು ಸತಿಯಂತೆ ಮುಚ್ಚಿಡಬಲ್ಲಳು, ವಿಲಾಸಿನಿಯಂತೆ ಮೆರೆಸಬಲ್ಲಳು. ನೋಡುವ ಕಣ್ಣನ್ನು ತಣಿಸುತ್ತಾಳೆ, ಬೇಡುವ ಮನಸ್ಸನ್ನು ಮುದಗೊಳಿಸುತ್ತಾಳೆ. ಆದರೆ ಆಕೆಯನ್ನು ನೋಡುವ ಕಣ್ಣಿನಲ್ಲಿ ಒಲವೂ, ಮನಸ್ಸಿನಲ್ಲಿ ಮುದವೂ ಮೂಡಿರಬೇಕು. ಈ ರಸಿಕ ಹೃದ್ವನವಾಸಿನಿಯನ್ನು ಬಲ್ಲವರು ಬಹಳಿಲ್ಲ. ಆಕೆಯನ್ನು ಎಲ್ಲ ರೂಪ ಗುಣಗಳಲ್ಲಿಯೂ ಬಲ್ಲವರು ಇಲ್ಲವೇ ಇಲ್ಲವೆಂದರೂ ಒಪ್ಪುವುದು. ಸುಂದರಿಯ ನಗೆ ಕೆಲವರಿಗೆ ಮೆಚ್ಚು; ಹಗೆ ಕೆಲವರಿಗೆ ಮೆಚ್ಚು. ಬೇಸರದಿಂದ ಬಾಗಿದ ಹುಬ್ಬು ಕೆಲವರಿಗೆ ಒಪ್ಪು; ನಗೆಯಿಂದ ಎತ್ತಿದ ಹುಬ್ಬು



ರಾವಣ ಜಟಾಯು — ಕಮಡೋಳಿ

ಫಟ ೨೧|

ಕೆಲವರಿಗೆ ಒಪ್ಪು. ಆಕೆಯನ್ನು ಲಲಿತೆಯನ್ನಾಗಿ ಕಾಣುವವರು ಕೆಲವರು ; ರುದ್ರೆಯನ್ನಾಗಿ ನೋಡುವವರು ಕೆಲವರು. ಆದರೆ ಈಯೆಲ್ಲ ನೋಟದಲ್ಲಿಯೂ ಮನದ ಬಗೆ ಮುಂದಾಗಿದೆ. ನೋಡುವವನ ನರ್ಮದ್ಯುತಿಯ ಮೇಲೆ ಜಗತ್ತಿನ ಕ್ಲೇಶಾನಂದಗಳು ತೂಗಿ ತೊನೆಯುತ್ತಿರುತ್ತವೆ. ಅವನಿಗೆ ಗೋಚರವಾಗುವ ಸತ್ಯ ಸೌಂದರ್ಯಗಳು ಜಗತ್ತಿನ ಕಲ್ಯಾಣಕ್ಕೆ ಕಾರಣಗಳಾಗುತ್ತವೆ.

ನಿಸರ್ಗವನ್ನು ಮಾನವನೂ ನೋಡುತ್ತಾನೆ, ಕವಿ ಕಲಾವಿದರೂ ನೋಡುತ್ತಾರೆ. ಅದೇ ಹಸಿರು ಚೆಲ್ಲಿದ ಮರಗಳ ಗುಂಪು, ಮರಗಳ ಕನ್ನಡಿಯಂತೆ ಕಾಣಬರುವ ಅದೇ ಕೊಳ, ಮುಳುಗುವ ಹುಟ್ಟುವ ಅದೇ ಸೂರ್ಯ, ಅದೇ ಹಾಡುವ ಹಕ್ಕಿ. ಮಾನವನ ಮನಸ್ಸಿಗೆ ಯಾವದು ಏಕರೀತಿಯ, ಏಕರೂಪದ, ಏಕನಾದದ ಬೇಸರವನ್ನುಂಟುಮಾಡುವುದೋ, ಅದೇ ನೋಟ ಕವಿ ಕಲಾವಿದರ ಮನಸ್ಸಿಗೆ ನವನವೋನ್ಮೇಷಶಾಲಿನಿಯಾಗಿ ಕಾಣಬರುತ್ತದೆ. ನಾಲ್ಕುದಿನ ಅದೇ ನೋಟವನ್ನು ನೋಡಿ ಅವರು ಬಗೆ ಬಗೆಯ ಅನುಭವಗಳನ್ನು ಕಂಡುಂಡು ಉಚ್ಚರಿಸುತ್ತಾರೆ. ನೋಟದ ಯಾವ ಸ್ವರವೈಖರಿಯು ಮಾನವನ ಮನಸ್ಸಿನ ಮೇಲೆ ಹಾದುಹೋಗುವುದೋ ಅದೇ ಸ್ವರಸೌರಭವು ಕವಿ ಕಲಾವಿದರ ಹೃದಯದಲ್ಲಿ ನಿಂತು ಅವರ ಜೀವನ ವೀಣೆಯನ್ನು ಮಿಡಿಯುತ್ತದೆ.

ನಿಸರ್ಗದಲ್ಲಿ ಯಥೇಚ್ಛವಾಗಿ ಧಾರಾಳವಾಗಿ ಕಂಡುಬರುವ ಸೌಂದರ್ಯವನ್ನು ಕಾಣುವ ಕಣ್ಣನ್ನು ಮಾನವನು ಜಾಗೃತಗೊಳಿಸಿರುವುದಿಲ್ಲ. ಆದರೆ ಅವನೇ - ಅದೇ ನೋಟದ ಒಂದು ಚಿತ್ರ, ಅದೇ ಅನುಭವದ ಒಂದು ಗೀತೆಯನ್ನು ಕೇಳಿದರೆ ಪುಲಕಿತನಾಗುತ್ತಾನೆ. ರೂಪರಹಿತವಾಗಿದ್ದ ನಿಸರ್ಗವು ಚಿತ್ರಗಾರನ ಕುಂಚಕ್ಕೆ ಸಿಕ್ಕಿ ರೂಪಸಹಿತವಾಗುತ್ತದೆ; ಕವಿಯ ಶಬ್ದಜಾಲಕ್ಕೆ ಸಿಕ್ಕಿ ನಾದನಂದಿತವಾಗುತ್ತದೆ; ಆಗ ಅದು ಸಾಮಾನ್ಯನ ಮನಸ್ಸನ್ನು ಮಿಡಿದು, ಕುಣಿಸಿ, ಕೆರಳಿಸಿ, ನಲಿಸಿ, ನಗಿಸುವ ಕೆಲಸವನ್ನು ಮಾಡಲು ಸಮರ್ಥವಾಗುತ್ತದೆ. ನಿಸರ್ಗವು ಕವಿ ಕಲಾವಿದರ ಕೈಗೆ ಸಿಕ್ಕಿ ತನ್ನ ಪುನರೋದ್ಧಾರವನ್ನು ಕಂಡುಕೊಳ್ಳಬೇಕಾಗುತ್ತದೆ. ಕವಿ ಕಲಾ

ವಿದರೂ ನಿಸರ್ಗವನ್ನು ಆಶ್ರಯಿಸಿ ತಮ್ಮ ಚೇತನಗಳನ್ನು ಜಾಗೃತಗೊಳಿಸಿ ಕೊಂಡು ಆತ್ಮಾನಂದವನ್ನು ಪಡೆಯಬೇಕಾಗುತ್ತದೆ.

ಇಂತಹ ದೃಷ್ಟಿ ಕಮಡೋಳಿಯವರ ಪ್ರಕೃತಿ ನೋಟಗಳಲ್ಲಿ ಕಂಡುಬರುತ್ತದೆ. ಪ್ರಕೃತಿಯನ್ನು ಕುತೂಹಲದಿಂದ ನೋಡುವುದು, ಅದರ ಸನಾತನ ಸೂಕ್ಷ್ಮ ತತ್ವಗಳನ್ನು ಭಕ್ತಿಯಿಂದ ಅರಿತುಕೊಳ್ಳುವುದು, ಆ ಅರಿವನ್ನು ಸೌಂದರ್ಯದ ಹಾದಿಯಲ್ಲಿ ಹರಿಸುವುದು - ಇವೇ ಕಮಡೋಳಿ ಯವರ ಚಿತ್ರಕಲೆಯ ವೈಶಿಷ್ಟ್ಯಗಳು.

ಆ ಮಿ ಾ ನ್ ಸಾ ಹೇ ಬ್ ಕಮಡೋಳಿಯವರಿಗೆ ಈಗ ಮೂವತ್ತ ಒಂಭತ್ತು ವರ್ಷ. ಹುಬ್ಬಳ್ಳಿಯಲ್ಲಿ ಒಂದು ಶಾಲೆಯಲ್ಲಿ 'ಡ್ರಾಯಿಂಗ್ ಮಾಸ್ತರ'ರಾಗಿದ್ದಾರೆ. ಮುಂಬಯಿಯ ಜೆ. ಜೆ. ಕಲಾಶಾಲೆಯಲ್ಲಿ ಏಳು ವರ್ಷ ಅಭ್ಯಾಸಮಾಡಿ ಜೀವನ ಪ್ರತಿಚಿತ್ರ ಪ್ರಕೃತಿನೋಟ, ಭಿತ್ತಿಚಿತ್ರಗಳಲ್ಲಿ ನೈಪುಣ್ಯವನ್ನು ಪಡೆದಿದ್ದಾರೆ. ಪ್ರಸಿದ್ಧ ಚಿತ್ರಗಾರರಾದ ಟ್ರೆನ್‌ಡಾಡರವರೂ, ಚೂಡೇಕರ್ ಅವರೂ ಕಮಡೋಳಿಯವರ ಗುರುಗಳು. ಭಾರತದಲ್ಲಿಯೂ ವಿದೇಶಗಳಲ್ಲಿಯೂ ಆದ ಅನೇಕ ಚಿತ್ರಪ್ರದರ್ಶನಗಳಲ್ಲಿ ಪಾರಿತೋಷಿಕ ಗಳನ್ನು ಪಡೆದಿದ್ದಾರೆ. ೧೯೨೪ರಲ್ಲಿ ಮುಂಬಯಿ ಗವರ್ನರಾಗಿದ್ದ ಸರ್ ಜಾರ್ಜ್ ಲಾಯಿಡ್ ಅವರ ಸತಿ ಶ್ರೀಯುತರ ಚಿತ್ರಗಳನ್ನು ವಿಶೇಷವಾಗಿ ಪ್ರಶಂಸಿಸಿ ತಮ್ಮ ಪತಿಗೆ ಕಮಡೋಳಿಯವರ ಪರಿಚಯಮಾಡಿಸಿಕೊಟ್ಟರು. ಅದರ ಫಲವಾಗಿ ಚಿತ್ರಗಾರರನ್ನು ಮಹಾಬಳೇಶ್ವರಕ್ಕೆ ಅವರು ಕರೆಸಿಕೊಂಡು ಅಲ್ಲಿನ ಕೆಲವು ಸುಂದರ ನಿಸರ್ಗ ನೋಟಗಳನ್ನು ಬರೆಯಿಸಿದರು.

ವೆಂಬ್ಲಿ ಪ್ರದರ್ಶನದ (೧೯೨೪) 'ಬಾಂಬೇ ರೂಮಿ'ನಲ್ಲಿ ಶ್ರೀಯುತರ "ಇಂಡಸ್ಟ್ರಿ" ಚಿತ್ರಕ್ಕೆ ಎಡೆ ದೊರಕಿತು. ಸರ್ ಜಾರ್ಜ್ ಲಾಯಿಡ್ ಅವರು ಅದನ್ನು ಕ್ರಯಕ್ಕೆ ತೆಗೆದುಕೊಂಡು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತ ಪಡಿಸಿದ್ದಾರೆ.

"Industry - a stalwart Marathe Spinner with Charaka in the background would delight the heart of Mahatma Gandhi. This picture could be confidentally put into Competition with any picture anywhere."

ಲಂಡನ್ನಿನ ಪ್ರಸಿದ್ಧ ಪತ್ರಿಕೆಗಳು ಕಮಡೋಳಿಯವರ ಕಲಾ ನೈಪುಣ್ಯವನ್ನು ಪ್ರಶಂಸಿಸಿದವು. ಶ್ರೀಯುತರ ಕೆಲವು ಚಿತ್ರಗಳು ಲಂಡನ್ನಿನಲ್ಲಿ ಮಾರಾಟವಾದವು.

ಕಮಡೋಳಿಯವರು ಬಾಲ್ಯದಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡು ಪಾಡು ಪಡಬೇಕಾಯಿತು. ಅನಾಥರಾದ ಇವರ ಆಸ್ತಿಯನ್ನು ಸರ್ಕಾರದವರು ಒಬ್ಬ ಅರಳೆವ್ಯಾಪಾರಿಗಳ ಕೈಯಲ್ಲಿ ಯೋಗ್ಯ ಬಡ್ಡಿ ಪ್ರಕಾರ ಕೊಟ್ಟು ಖರ್ಚಿನ ಲೆಕ್ಕವಿಡಬೇಕೆಂದು ಆಜ್ಞಾಪಿಸಿದರು. ಕಮಡೋಳಿಯವರ ಚಿತ್ರಗಳೆಂದರೆ ಸಾಹುಕಾರರಿಗೆ ತಿರಸ್ಕಾರ. ಕಪಾಟಿನ ಕದಗಳಿಗೂ ಗೂಡಿನ ನೆಲವನ್ನು ಹಾಸುವುದಕ್ಕೂ ಅವು ವಿನಿಯೋಗವಾಗಿದ್ದವು. ಒಂದು ಸಲ ಒಬ್ಬ ಜರ್ಮನ್ ಹತ್ತೀ ದಳ್ಳಾಳಿ ಸಾಹುಕಾರರ ಬಳಿ ವ್ಯವಹಾರಕ್ಕೆ ಬಂದವರು ಈ ಚಿತ್ರಗಳನ್ನು ಅಕಸ್ಮಾತ್ತಾಗಿ ಕಂಡರು. ಸಾಹುಕಾರರನ್ನು ಸರಿಯಾಗಿ ವಿಚಾರಿಸಿಕೊಂಡು ಎಲ್ಲ ಚಿತ್ರಗಳನ್ನು ಬೆಲೆಗೆ ಕೊಂಡರು. ಈ ಪರಿಸ್ಥಿತಿಯಲ್ಲಿ ಸಮಾನದುಃಖಿಗಳಾದ ಚಿತ್ರಗಾರರ ಅಣ್ಣಂದಿರು ಅವರಿಗೆ ವಿಶೇಷ ಪ್ರೋತ್ಸಾಹ, ಧೈರ್ಯ ಉತ್ಸಾಹಗಳನ್ನು ನೀಡಿದರು. ಸಮಯೋಚಿತವಾದ ಈ ನೆರವು ದೊರೆಯದಿದ್ದರೆ ಕಮಡೋಳಿಯವರು ಚಿತ್ರಶಿಲ್ಪಿಗಳಾಗುವ ಯೋಚನೆಯನ್ನೇ ಬಿಡುತ್ತಿದ್ದರೇನೋ ?

ಕಾಹಿಲೆಬಿದ್ದು ಕಮಡೋಳಿಯವರು ಮುಂಬಯಿಯನ್ನು ಬಿಟ್ಟು ಹುಬ್ಬಳ್ಳಿಗೆ ಬಂದುಬಿಟ್ಟರು. ಕಾಹಿಲೆಬಿದ್ದಿದ್ದಾಗ ಯಾವ ಯುರೋಪಿಯನ್ ಡಾಕ್ಟರ ಬಳಿಗೆ ಹೋದರೂ ಇವರು ಚಿತ್ರಗಾರರು ಎಂದು ತಿಳಿದ ಕೂಡಲೆ ಬೇಕಾದಷ್ಟು ಮರ್ಯಾದೆ ಮಾಡಿ ಯಾವ ಪ್ರತಿಫಲವನ್ನೂ ಸ್ವೀಕರಿಸದೆ ಅವರು ಉಚಿತ ಚಿಕಿತ್ಸೆ ನಡೆಸಿ ಕಳುಹಿಸಿಕೊಡುತ್ತಿದ್ದರು.

ಇಂದು ಕಮಡೋಳಿಯವರು ರಚಿಸಿದ ಚಿತ್ರಗಳನ್ನು ಕಟ್ಟು ಕಟ್ಟಿಟ್ಟು ಕುಳಿತಿದ್ದಾರೆ. ಅವುಗಳನ್ನು ನಾನು ತೆಗೆಸಿದಾಗ ಅವುಗಳ ಮೇಲೆ ಒಂದಂಗುಲ ಧೂಳು ಕುಳಿತಿತ್ತು. “ಹಾಗಾದರೆ ಚಿತ್ರಕಲೆಯನ್ನು ಮರೆತುಬಿಟ್ಟಿರಾ” ಎಂದು ನಾನು ಕೇಳಿದಾಗ “ಅದು ನನ್ನ ಆತ್ಮಕ್ಕೆ ಅನ್ನ. ಎಂದಿಗೆ ಮರೆತೇನು ?” ಎಂದರು.

"ನೀವು ಪ್ರಕೃತಿನೋಟಗಳನ್ನು ಹೇಗೆ ಚಿತ್ರಿಸುತ್ತೀರಿ" ಎಂದು ಕೇಳಿದೆ.

"ಪ್ರಕೃತಿಚಿತ್ರಗಳಿಗೆ ಬೆಳಿಗ್ಗೆ ೮ ರಿಂದ ೧೦ ರ ವರೆಗೆ ಸಂಜೆ ಸೂರ್ಯಾಸ್ತಕ್ಕೆ ಅರ್ಧಗಂಟೆ ಮುಂಚೆ ಇವೇ ಉತ್ತಮ ವೇಳೆಗಳು. ನಮಗೆ ಬೇಕಾದ ಬೆಳಕು-ಕತ್ತಲೆಗಳೂ, ಬಣ್ಣದ ಯುಕ್ತ ನಿಯೋಜನೆಯೂ ದೊರೆಯುವುದು ಆಗಲೇ. ಪ್ರಕೃತಿಯ ನೋಟವನ್ನು ನಾಲ್ಕಾರು ಸಾರಿ ಕಂಡು ಬಂದು, ಒಂದುಸಲ ಚಿತ್ರಿಸುವುದಕ್ಕೆ ಆರಂಭಿಸುತ್ತೇನೆ. ಬೆಳಕು ಇರುವವರೆಗೆ ಕೆಲಸ ಮಾಡುತ್ತೇನೆ. ಅದು ಮುಗಿದುಬಿಟ್ಟರೆ ನನ್ನ ಅದೃಷ್ಟ. ಮುಗಿಯದೆ ಬೆಳಕು ಮುಂದಕ್ಕೆ ಜಾರಿದರೆ ನೆಪ್ಪಿನಿಂದ ಚಿತ್ರವನ್ನು ಮುಗಿಸ ಲೆತ್ನಿಸುತ್ತೇನೆ. ಒಂದೊಂದುಸಲ ಚಿತ್ರ ಚೆನ್ನಾಗುತ್ತದೆ, ಅನೇಕಸಲ ಕೆಟ್ಟುಹೋಗುತ್ತದೆ. ಪಟ್ಟ ಶ್ರಮವೆಲ್ಲಾ ನೀರಿನಲ್ಲಿ ಹೋಮ ಮಾಡಿ ದಂತಾಗುತ್ತದೆ. ಪ್ರಕೃತಿನೋಟವನ್ನು ಸರಿಯಾಗಿ ಚಿತ್ರಿಸುವುದಕ್ಕೆ ಸೂರ್ಯೋದಯವಾದ ಅರ್ಧಗಂಟೆ ಸೂರ್ಯಾಸ್ತಕ್ಕೆ ಅರ್ಧಗಂಟೆ ಮುಂಚೆ ಇವೇ ಎರಡು ವೇಳೆಗಳು."

"ಪ್ರಕೃತಿಯಿದ್ದಂತೆಯೇ ಚಿತ್ರಿಸುವಿರಾ."

"ಕೆಲವರು ಚಿತ್ರಿಸುತ್ತಾರೆ. ನಾನು ಹಾಗೆ ಮಾಡುವುದಿಲ್ಲ. ಪ್ರಕೃತಿ ಇದ್ದಂತೆಯೇ ಪ್ರತಿಚಿತ್ರ ಮಾಡಬೇಕಾದಲ್ಲಿ ಇಷ್ಟೊಂದು ಶ್ರಮವನ್ನೇತಕ್ಕೆ ಪಡಬೇಕು. ಕ್ಯಾಮಿರಾ ತೆಗೆದುಕೊಂಡು ಹೋದರೆ ಆಯಿತು. ನನ್ನ ಕಣ್ಣಿಗೆ ಬೇಕಾಗುವಂತೆ ಪ್ರಕೃತಿಯನ್ನು ಪುನರ್ನಿಯೋಜನೆ ಮಾಡುತ್ತೇನೆ. ಗುಡ್ಡವಿದ್ದಲ್ಲಿ ಮರವನ್ನು ನೆಡುತ್ತೇನೆ, ಮರವಿದ್ದಲ್ಲಿ ಕೊಳವನ್ನು ತೋಡು ತ್ತೇನೆ. ಪ್ರಕೃತಿ ಇದ್ದಂತೆಯೇ ಚಿತ್ರಿಸಿಬಿಟ್ಟರೆ ಅದನ್ನು ನೋಡುವುದಕ್ಕೇ ಆಗುವುದಿಲ್ಲ, ಪ್ರಕೃತಿಯ ಅನೇಕ ಲೋಪದೋಷಗಳನ್ನು ಸರಿಪಡಿಸಿ ಅದು ಸರ್ವಾಂಗ ಸುಂದರವಾಗಿ ಕಾಣುವಂತೆ ಚಿತ್ರಿಸುತ್ತೇನೆ." ಎಂದು ಹೇಳಿದರು.

ಕಲಾವಿದನಾದ ದೇವ ಮತ್ತು ಕಲಾವಿದನಾದ ಮಾನವ-ಇಬ್ಬರ ಕೃತಿಗಳ ಚೆಲುವನ್ನೂ ತಮ್ಮ ಪ್ರತಿಭೆಯ ಮೂಲಕ ಕಲಾಪ್ರೇಮಿಗಳಿಗೆ ಕಾಣಿಸಲು ಶ್ರೀಯುತರು ಯತ್ನಿಸಿದ್ದಾರೆ. ಇವರು ರಚಿಸಿರುವ 'ಹುಬ್ಬಳ್ಳಿಯ ನೋಟಗಳು,' 'ಗೋವಾ ನೋಟಗಳು' ಪ್ರಕೃತಿಯ ವಿವಿಧ ಚೆಲುವು



ತಕಲಿ. ಕಮಡೋಳಿ

[ಪುಟ೩೪



ಲಂಬಾಣಿ ಮುದುಕಿ

ಕಮಡೊಳ್ಳಿ

ಪುಟ ೨೫]

ಸೊಬಗುಗಳನ್ನು ಸಾರುತ್ತವೆ. ' ಗೋವಾದ ಕರಂಜೋಲ್ ಕೊನೆಕಾವಲಿನ ನಿಲ್ದಾಣ'ದ ಹಿಂದಿರುವ ಭವ್ಯ ನಿಸರ್ಗನೋಟ, ' ಕ್ಯಾಸಲ್‌ರಾಕಿನ ಹಾದಿ ಯಲ್ಲಿ'ನ ಗಾಢಗಭೀರತೆ ಅತ್ಯಂತ ಮಾರ್ಮಿಕವಾಗಿವೆ. ಕರಂಜೋಲಿನ ನೋಟದಲ್ಲಿ ಚೇತೋಹಾರಿಯಾದ ಪ್ರಕೃತಿ ಸೂರ್ಯಕಾಂತಿಯೊಂದಿಗೆ ಚೆಲ್ಲಾಟವಾಡುವಂತಿದೆ. ಎಷ್ಟು ಸುಂದರ - ಆದರೆ ಎಂತಹ ಮೌನ! ಕ್ಯಾಸಲ್‌ರಾಕ್ ಹಾದಿಯ ನೋಟ ಸನಾತನ ಪ್ರಕೃತಿಯ ಗರ್ಭದಲ್ಲಿ ಅಡಗಿರುವ ನಿತ್ಯವಾಣಿಯಂತಿದೆ. ವ್ಯಕ್ತದಿಂದ ಅವ್ಯಕ್ತದೆಡೆಗೆ ಹೋಗ ಲನುವಾದ ಮಾನವನು ಹೆಬ್ಬಾಗಿಲಿನಲ್ಲಿ ಹೆದರಿ, ಧೈರ್ಯಗೊಂಡು, ಒಳ ಹೊಕ್ಕು ಅನಂತತೆಯಲ್ಲಿ ಲೀನವಾಗುತ್ತಾನೆ. ಒಂದೆಡೆ ಶತಮಾನಗಳಿಂದ ಬೆಳೆದುಬಂದ ಮರ; ಇನ್ನೊಂದೆಡೆ ಶತಮಾನಗಳ ಜೋಂಪಿಗೆ ಸಿಕ್ಕಿದ ಜಡಮಾನವ ಪ್ರಾಣಿ. ಒಂದು ಶಕ್ತಿಯ ಸಂಕೇತ - ಇನ್ನೊಂದು ದೌರ್ಬಲ್ಯದ ಚಿನ್ಹೆ. ಈ ಚಿತ್ರವನ್ನು ನಮ್ಮ ಸಂಸ್ಕೃತಿಯ ಸಂಕೇತವೆಂದು ಪರಿಗ್ರಹಿಸಬಹುದು.

## ಲಂಬಾಣಿ ಮುದುಕಿ

ಕಮಡೋಳಿಯವರ ಕಲಾಪ್ರತಿಭೆಯನ್ನು ಸಾರುವ ಕೃತಿಗಳಲ್ಲಿ ಇದೊಂದು. ಜೀವನದ ಸಂಧ್ಯೆಯನ್ನು ಸಮೀಪಿಸಿರುವ ಲಂಬಾಣಿ ಮುದುಕಿ ಸಂತೆಯಲ್ಲಿ ಕೋಳಿಗಳನ್ನು ಮಾರಲು ಕುಳಿತಿದ್ದಾಳೆ. ಆದರೆ ವ್ಯಾಪಾರದ ಕಡೆಗೆ ಲಕ್ಷ್ಯವಿಲ್ಲ. ಮನಸ್ಸೆಲ್ಲೋ ಹರಿದಾಡುತ್ತಿದೆ. ಯಾವದೋ ಹಳೆಯ ನೆನಪು. ಸಂತೆಯಲ್ಲಿ ಓಡಿಯಾಡುವ ಜನರನ್ನು ನೋಡಿ ತನ್ನ ಇನಿಯನನ್ನು ನೆನೆಯುತ್ತಿರಬಹುದೇ? ಬಾಳಿನ ವಸಂತ ವನ್ನು ನೋಡಿ ತನ್ನ ವರ್ಷವನ್ನು ಶಪಿಸುತ್ತಿರಬಹುದೇ? ಕುಣಿಯುತ್ತಿರುವ ಎಳೆಯರನ್ನು ಕಂಡು ತನ್ನ ಜೀವವನ್ನು ತಣಿಸುವ ಕಂದನಿಲ್ಲವಲ್ಲಾ ಎಂದು ಚಿಂತಿಸುತ್ತಿರಬಹುದೇ? ಅವಳ ಕಣ್ಣುಗಳಲ್ಲಿ ಅಪಾರ ವೇದನೆ, ಚಿಂತನೆ ನೆನಹುಗಳು ಮೂಡಿವೆ. ನುಲಿದ ತುಟಿ ಬಾಳಿನ ಕಹಿಯನ್ನು ಎತ್ತಿ ತೋರುತ್ತಿದೆ. ಮುದುಕಿ ಬಹಳ ಕಹಿಯಾದ ಜೀವನವನ್ನು ಸಾಗಿಸಿದ್ದಾಳೆ. ಒಂದು ತುತ್ತು ಕೂಳಿಗೆ ಊರೂರು ಅಲೆಯುತ್ತ, ಮನೆ ಮನೆ ತಿರುಗುತ್ತ,

ಮಾಡಬಾರದುದನ್ನು ಮಾಡುವುದು ಸುಖವೇ ? ಆ ತುತ್ತುಕೂಳು ಪಾಪದ ಯಾವ ಯಾವ ಕೊನೆಯನ್ನು ಮುಟ್ಟಿಸಿದೆಯೋ ಬಲ್ಲವರಾರು ? ಭಿಕ್ಷೆ ಸಿಗ ದಿದ್ದರೆ ಕಳ್ಳತನ – ಸಿಕ್ಕಿಬೀಳದಿದ್ದರೆ ಹೊಟ್ಟೆ ತುಂಬಿತು – ಸಿಕ್ಕಿಬಿದ್ದರೆ ಶಾಸನದ ಕಠೋರ ನಿರ್ದಯ ಪ್ರತಿರೋಧ. ಮುದುಕಿಯ ಎದುರಿಗಿರುವ ಕೋಳಿಗಳೂ ಕದ್ದವು ಇರಬಾರದೇತಕ್ಕೆ ? ಮೈತುಂಬಿ, ಮಲೆತಿರುವ ಕೋಳಿ ಗಳನ್ನು ಮಾರಬೇಕಾಗಿದೆ. ಮಾರಿಬಂದ ಹಣದಿಂದ ಹೊಟ್ಟೆ ಹೊರೆಯ ಬೇಕಾಗಿದೆ. ಆ ಕೋಳಿಗಳನ್ನು ಕೊಳ್ಳುವವರು ಎಂತಹ ಭಾಗ್ಯವಂತರು ಎಂದು ಚಿಂತಿಸುತ್ತಿರಬಹುದೇ ? ಮಾರಲು ಕುಳಿತು ಎಷ್ಟು ಹೊತ್ತಾದರೂ ಯಾರೂ ಬರದಿರುವುದನ್ನು ಕಂಡು ಬೇಸತ್ತು ತನ್ನ ದುರ್ವಿಧಿಯನ್ನು ಶಪಿಸುತ್ತಿರಬಹುದೇ ?

ಬತ್ತಿದ ಮುಖ, ರಕ್ತ ಮಾಂಸಹೀನವಾಗಿ ಚರ್ಮ ಎಲುವುಗಳನ್ನು ಎತ್ತಿ ತೋರುವ ಕೊರಳು, ಒಣಗಿದ ಕೈಕಾಲುಗಳು – ಮುದುಕಿ ಕುಳಿತಿರುವ ಸಹಜಭಂಗಿ, ಹೊಸೆದ ಹಗ್ಗದಂತಿರುವ ತಲೆಗೂದಲು ಚಿತ್ರಕ್ಕೆ ಅಪೂರ್ವ ಜೀವನಸಾಮೀಪ್ಯವನ್ನು ತಂದುಕೊಟ್ಟಿವೆ. ಮನಸ್ಸಿನ ಕ್ಷೋಭೆ ಆಂದೋಲನಗಳನ್ನು ಸೂಕ್ಷ್ಮವಾಗಿಯೂ ಚಿತ್ತವಿದ್ರಾವಕವಾಗಿಯೂ ತೋರುವ ಕೃತಿಗಳಲ್ಲಿ ಲಂಬಾಣಿ 'ಮುದುಕಿ' ಹಿರಿಯ ಸ್ಥಾನವನ್ನು ಪಡೆಯುತ್ತದೆ.

ಇದು ಚಿತ್ರಕಲೆಯಲ್ಲಿ ತ್ರಿಕೋಣ ಕೃತಿಯ ಜಾತಿಗೆ ಸೇರಿದೆ. ನೋಟಕನ ದೃಷ್ಟಿ ಕೇಂದ್ರೀಕೃತವಾಗಿ ಚಿತ್ರದ ಮುಖದ ಮೇಲೆ ಬೀಳುವುದೇ ಈ ಬಗೆಯ ಉದ್ದೇಶ. ಕಮಡೋಳಿಯವರು ತಮ್ಮ ಉದ್ದೇಶವನ್ನು ಉತ್ಕೃಷ್ಟರೀತಿಯಲ್ಲಿ ಸಾಧಿಸಿದ್ದಾರೆ. ಈ ಚಿತ್ರದ ಒಂದು ಪ್ರತಿ ಪತಿಯಾಲಾ ಮಹಾರಾಜರವರ ವಶದಲ್ಲಿದೆ.

ಕಲಾವಿದ ಕಮಡೋಳಿಯವರು ಹುಟ್ಟುಮುಸಲ್ಮಾನರು. ಆದರೆ ಅವರ 'ಲಕ್ಷ್ಮೇಶ್ವರದ ಸೋಮನಾಥ ದೇವಾಲಯ' 'ಹಂಪೆಯ ಕಲ್ಲಿನ ರಥ' ಚಿತ್ರಗಳು ಕೆಲವರನ್ನು ಬೆರಗುಗೊಳಿಸಬಹುದು. ಕಲೆ ಜಾತಿ ಮತ ಪಂಥಗಳ ಅಧೀನವಲ್ಲ. ಆ ಸಣ್ಣ ಪುಟ್ಟ ಬಂಧನಗಳನ್ನು ಹರಿದೊಗೆದವರೇ ಕಲಾವಿದರೆನಿಸಿಕೊಳ್ಳಲು ಅರ್ಹರಾದವರು. ಸೋಮನಾಥ ದೇವಾಲಯದ



ಹಂಪೆಯ ಕಲ್ಲಿನ ರಥ ಕಮಡೋಳಿ



ಲಕ್ಷ್ಮೇಶ್ವರದ ದೇವಾಲಯ ಕಮಡೋಳಿ

[ಪುಟ ೨೬



ಟಿಪ್ಪುವಿನ ಗುಂಬಜ್ ಕಮಡೋಳಿ



ಇಬ್ರಾಹಿಂ ರೋಜಾ ಕಮಡೋಳಿ

ಶಿಲ್ಪಸೌಂದರ್ಯ, ದೇವಾಲಯುದ ಮುಂದೆ ಸಂಚರಿಸುವ ಭಕ್ತಭಕ್ತೆಯರ ನಡೆ ನುಡಿ, ನಿಲುವು ಚೆಲುವು, ದಯೆ ದೈನ್ಯ, ಹಂಪೆಯ ಮಹಾರಥದ ಕಲಾಪ್ರೌಢಿಮೆ ಕಲಾವಿದನ "ಹಾಸುಹೊಕ್ಕು"ಗಳಾಗಿರುವುದರಿಂದಲೇ ಅವುಗಳಲ್ಲಿ ವಸ್ತುವಿಗನುಗುಣವಾದ ತಾದಾತ್ಮ್ಯವೂ ಅಂತಃಕರಣವೂ ಕಂಡುಬರುತ್ತವೆ. ಮೈಸೂರು ಹುಲಿಯ ಸಮಾಧಿ, ವಿಜಾಪುರದ ಇಬ್ರಾಹಿಂ ರೋಜಾ ಚಿತ್ರಗಳು ಚಿತ್ರಗಾರನ ಕವಿಹೃದಯವನ್ನು ಕಾಣಿಸುತ್ತವೆ. ಗುಂಬಜಿನ ಎದುರಿಗೆ ಹುಲಿಗೆ ಪ್ರಿಯವಾದ ನಸುನೀಳ ಸೈಪ್ರಿಸ್ ಮರಗಳು – ಸ್ಮಶಾನಸದೃಶವಾದ ಶಾಂತಿಯ ಪಲ್ಲಂಕದಲ್ಲಿ ಟೀಪೂ ಪವಡಿಸಿದ್ದಾನೆ. ಚಿತ್ತವನ್ನು ಮುತ್ತುವ ಆ ನೋಟದ ಹಿಂದೆ ಎಂತಹ ದುಃಖ ಎಂತಹ ವೀರತ್ಯಾಗ ಮೂಡಿವೆ. ಅದಕ್ಕೆ ಪ್ರತಿಯಾಗಿ ಇಬ್ರಾಹಿಂ ರೋಜಾ. ಅದೂ ದುಃಖಗೀತೆಯೇ! ಆದರೆ ಜನಸಾಂದ್ರತೆಯಿಂದ ಸುಖಗಳ ಸುಳಿದಾಟದಿಂದ ದುಃಖದ ದಾರುಣತೆ ತುಸು ಕಡಿಮೆಯಾಗಿದೆ.

ವಸ್ತುವು ಹಿಂದುಗಳಿಗೆ ಬೇಕಾದುದಿರಲಿ, ಮುಸಲ್ಮಾನರಿಗೆ ಬೇಕಾದುದಿರಲಿ, ಕಲಾವಿದನು ಅವುಗಳನ್ನು "ತನ್ನದು" ಮಾಡಿಕೊಂಡಿದ್ದಾನೆ. ವಸ್ತುವಿನ ಅಂತಃಕರಣವನ್ನು ಒಳಹೊಕ್ಕು ನೋಡಿ ಅದರ ಸುಖದುಃಖಗಳಲ್ಲಿ ಬೆರತುಹೋಗಿದ್ದಾನೆ. ಈ ಉದ್ಯಮದಲ್ಲಿ ಲಾಹೋರಿನ ಅಬ್ದುರ್ ರಹಮಾನ್ ಚುಗ್ತಾಯಿಯವರ ಪಂಕ್ತಿಗೆ ಕಮಡೋಳಿಯವರು ಸೇರತಕ್ಕವರಾಗಿದ್ದಾರೆ.

ಕಮಡೋಳಿಯವರ ಕೃತಿಗಳಲ್ಲಿ ಕಾಣಬರುವ ಕಲಾಪ್ರತಿಭೆ, ಸರಳ ಅಂತಃಕರಣ, ಉದಾರವಾದ ಧಾರ್ಮಿಕ ಸಮದೃಷ್ಟಿ, ಅತುಲವಾದ ಕರ್ನಾಟಕ ಅಭಿಮಾನ ಅವರನ್ನು ನಮ್ಮ ನಾಡಿನ 'ಹೆಮ್ಮೆ'ಯನ್ನಾಗಿ ಮಾಡಿವೆ; ಭಾರತದ ಕ್ರಿಯಾಶಾಲಿಗಳಾದ ಚಿತ್ರಗಾರರಲ್ಲಿ ಒಬ್ಬರನ್ನಾಗಿ ಮಾಡಿವೆ. ಆದರೆ ಭಾರತದ ಇತರ ಭಾಗಗಳು – ಬಂಗಾಳ, ಮಹಾರಾಷ್ಟ್ರ, ಆಂಧ್ರ, ಗುಜರಾತ್ ತಮ್ಮ ಕಲಾವಿದರನ್ನು ಆದರಿಸಿ ಸನ್ಮಾನಿಸುವಂತೆ ಕರ್ನಾಟಕ ತನ್ನ ಪ್ರತಿಭಾಶಾಲಿಗಳಾದ ಪುತ್ರರನ್ನು ಮೆಚ್ಚುವ ದಿನ ಇನ್ನೂ ಬರಬೇಕಾಗಿದೆ.

೧೦ – ೨ – ೧೯೩೯

———

# ೫. ಆಸ್ಥಾನ ವಿದ್ವಾನ್ ಬಿ. ದೇವೇಂದ್ರಪ್ಪ

ಸಾಮಾನ್ಯವಾಗಿ ವಾದ್ಯವಾದನ ನಿಪುಣರು ಉತ್ತಮ ಹಾಡುಗಾರರಾಗುವುದು ವಿರಳ. ಕರ್ನಾಟಕ ಪದ್ಧತಿಯ ಹಾಡುಗಾರರು ಹಿಂದೂಸ್ಥಾನಿಯನ್ನು ಶಾಸ್ತ್ರೋಕ್ತವಾಗಿಯೂ ಕಳಾಪೂರ್ಣವಾಗಿಯೂ ಹಾಡುವುದು ಬಹಳ ಕಷ್ಟ. ನಾನು ಕಂಡಂತೆ ದೇವೇಂದ್ರಪ್ಪನವರೊಬ್ಬರು ಇವುಗಳನ್ನು ಸಾಧಿಸಿದ್ದಾರೆ.

ಎತ್ತರದ ನಿಲವು, ತಿದ್ದಿದ ಮುಖಲಕ್ಷಣ, ಸರಳವಾದ ನಗುಮುಖ, ಮೈಸೂರಿನಲ್ಲಿ ಅಪರೂಪವಾಗಿ ಕಂಡುಬರುವ ಉತ್ತರದ ಕೋರೆ ರುಮಾಲು. ಇವು ದೇವೇಂದ್ರಪ್ಪನವರನ್ನು ನಿರ್ದೇಶಿಸುತ್ತವೆ. ಈಗ ದೇವೇಂದ್ರಪ್ಪನವರಿಗೆ ೪೦ ನೆಯ ವಯಸ್ಸು ನಡೆಯುತ್ತಿದೆ.

ನಾನು ಮೊದಲು ದೇವೇಂದ್ರಪ್ಪನವರ ಹಾಡುಗಾರಿಕೆಯನ್ನು ಕೇಳಿದಾಗ ಅವರ ವಿಚಾರವಾಗಿಯಾಗಲಿ ಕರ್ನಾಟಕ ಸಂಗೀತಗಾರರ ವಿಚಾರವಾಗಿಯಾಗಲಿ ಹೆಚ್ಚು ವಿಶ್ವಾಸದಿಂದಲ್ಲ ಎಂದು ಹೇಳಬೇಕಾಗಿದೆ. ದಕ್ಷಿಣದ ಕಡೆಯ ವಿದ್ವಾಂಸರ ಶ್ರುತಿಶೂನ್ಯವಾದ ಗಾನವನ್ನು ಕೇಳಿ ಕೇಳಿ ನಾನು ಬೇಸತ್ತಿದ್ದೆ; ಅತ್ತ ಕೆಲವು ಮಾನ್ಯ ಹಿಂದೂಸ್ಥಾನಿ ಗವಯ್‌ಗಳ ಗಾನವನ್ನು ಕೇಳಿ ಬೆರಗಾಗಿದ್ದೆ. ಅವರ ಶ್ರುತಿಪ್ರಾಧಾನ್ಯವೂ, ಕಳಾಶೋಭೆಯೂ ನನ್ನ ಚಿತ್ತವನ್ನು ಮುತ್ತಿದ್ದವು. ಕರ್ನಾಟಕ ಸಂಗೀತದಲ್ಲಿಯೇ ಕಳೆಯಿಲ್ಲ, ಅದು ಕೇವಲ ಕಾಗುಣಿತದ ಕಾಡೆಂಬ ಭಾವನೆ ನನ್ನ ಮನಸ್ಸಿನಲ್ಲಿ ಮನೆ ಮಾಡಿತ್ತು. ' ದೇವೇಂದ್ರಪ್ಪನವರು ಇಂದು ರಾತ್ರಿ ಹಾಡಲೊಪ್ಪಿದ್ದಾರೆ,



ದೇವೇಂದ್ರಪ್ಪ (ನಾರದನಪಾತ್ರದಲ್ಲಿ)



ದೇವೇಂದ್ರಪ್ಪ

[ಪುಟ ೨೮



ಪೈ. ವಾ. ಬಿತ್ತಾರಂ ಕೃಷ್ಣಪ್ಪ

ಪುಟ ೨೯]

ಅವರಲ್ಲಿಗೆ ಹೋಗುವ' ಎಂದು ಒಬ್ಬ ಸನ್ಮಿತ್ರರು ಹೇಳಿದಾಗ ನಾನು ಅವರನ್ನು ಮೆಚ್ಚಿಸುವುದರ ಸಲುವಾಗಿ ಒಪ್ಪಿ ಹೋದೆ. ಎರಡು ತಂಬೂರಿ ಗಳ ಶ್ರುತಿ ಹಚ್ಚಿ ದೇವೇಂದ್ರಪ್ಪನವರು ಹಾಡಲು ಕುಳಿತಿದ್ದರು. ಅಕ್ಕಪಕ್ಕ ದಲ್ಲಿ ಶಿಷ್ಯರ ಪಕ್ಕವಾದ್ಯ; ಹಿಂದೆ ಇಬ್ಬರು ಜತೆ ಹಾಡುಗಾರರು, ಎಲ್ಲಕ್ಕೂ ಮಿಗಿಲಾಗಿ ಹಾರ್ಮೋನಿಯಂ ವಾದ್ಯದ ಅಭಾವ. ತಂಬೂರಿಗಳ ಶ್ರುತಿಯಲ್ಲಿ ಗಾಯಕನ ಝೇಂಕಾರ ಲೀನವಾಗಿಬಿಟ್ಟಿತು. ಕರಹರಪ್ರಿಯದ ರಾಗದ ಆಲಾಪನೆ; ತ್ರಿಕಾಲಗಳಲ್ಲಿ ವಿಸ್ತಾರವಾಗಿ ನಡೆದ ಆಲಾಪನೆಯನ್ನು ಕೇಳಿ ನಾನು ಬೆರಗಾದೆ. ತ್ರಿಸ್ಥಾಯಿಗಳ ಮೇಲೂ ಗಾಯಕರು ತೋರಿದ ಗಂಭೀರ ಸ್ವಾಮ್ಯ. ರಾಗದ ನವೋನವವಾದ ವಿಶಾಲ ವಿಸ್ತಾರ, ನಯವಾದ ಗಮಕ ನೆರವಲುಗಳ ಪ್ರಯೋಗ – ಅಂದಿನ ರಾಗಾಲಾಪನೆ ಇಂದಿಗೂ ನನ್ನ ಕಿವಿಯಲ್ಲಿ ಮೊರೆಯುತ್ತಿದೆ. ಕರ್ನಾಟಕ ಸಂಗೀತಗಾರರ ಮೇಲೆ ನನ್ನ ಅಭಿಪ್ರಾಯ ಬದಲಾಗದಿದ್ದರೂ ಶಾಸ್ತ್ರದ ಮೇಲೂ, ದೇವೇಂದ್ರಪ್ಪನವ ರಂತಹ ಗಾಯಕರ ಮೇಲೂ ಅಭಿಪ್ರಾಯ ಬದಲಾಯಿಸಿತು. ಅಂದಿನ ಕಛೇರಿಯ ಕೊನೆಯಲ್ಲಿ ಗಾಯಕರು ಹಿಂದೋಳ, ಖಮಾಚ್ ಹಾಗೂ ಭೀಮಪಲಾಸ್ ತಿಲಾಣಗಳನ್ನು ಹಾಡಿದರು. ಹಿಂದೂಸ್ಥಾನಿ ಪದ್ಧತಿಯ ಮೇಲೆ ದೇವೇಂದ್ರಪ್ಪನವರಿಗಿರುವ ಹಿಡಿತ ವೇದ್ಯವಾಯಿತು. ಅವರನ್ನು 'ರಾಗಾಲಾಪನಚತುರ'ರೆಂದು ವಿದ್ವನ್ಮಂಡಳಿಯವರು ಸನ್ಮಾನಿಸಿರುವುದರಲ್ಲಿ ಆಶ್ಚರ್ಯವೇನು?

ದೇವೇಂದ್ರಪ್ಪನವರ ಮನೆಯವರು ಚಿತ್ರದುರ್ಗದ ಮದಿಕೆರೆ ನಾಯಕನ ವಂಶಸ್ಥರೆಂದು ತಿಳಿಯಬರುತ್ತದೆ. ಇವರ ತಂದೆ ಶ್ರೀ ಬಿ. ಎಸ್. ರಾಮಯ್ಯ ನವರು ಪ್ರಸಿದ್ಧ ಪಂಚವಾದ್ಯ ಗವಯ್‌ಗಳಾದ ಬೆಟಗೇರಿ ಸ್ವಾಮಿಗಳವರ ಶಿಷ್ಯರು. ರಾಮಯ್ಯನವರು ೨೪ ವರ್ಷ ಅವಿಚ್ಛಿನ್ನವಾಗಿ ಕನ್ನಡ ರಂಗ ಭೂಮಿಯ ಸೇವೆಮಾಡಿ 'ನಾಟ್ಯನಿಪುಣ' ಎಂಬ ಪ್ರಶಸ್ತಿಯನ್ನು ದೊರ ಕಿಸಿಕೊಂಡಿದ್ದಾರೆ. ನರ್ತನಕಲೆ, ಶಾಸ್ತ್ರಗಳಲ್ಲಿ ರಾಮಯ್ಯನವರು ಪೂರ್ಣ ಪಂಡಿತರಾಗಿದ್ದಾರೆ. ದೇವೇಂದ್ರಪ್ಪನವರಿಗೆ ಅವರ ತಂದೆಯೇ ಪ್ರಥಮ ಗುರುಗಳು. ಆರನೆಯ ವಯಸ್ಸಿನಿಂದ ತಂದೆಯವರಲ್ಲಿ ಸಂಗೀತವನ್ನು ಅಭ್ಯಾಸಮಾಡುವ ಸುಸಂಧಿ ದೊರೆಯಿತು. ೧೬ನೆಯ ವಯಸ್ಸಿನಲ್ಲಿ ಕನ್ನಡ

ಲೋವರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ೧೮ ನೆಯ ವಯಸ್ಸಿನಲ್ಲಿ ಹೊನ್ನಾಳಿಯಲ್ಲಿ ಶಾಲಾಶಿಕ್ಷಕರಾಗಿ ಕೆಲಸಕ್ಕೆ ಸೇರಿದರು. ಅದೇ ವರ್ಷ ಶಿರಾಳಕೊಪ್ಪದ ಗದಿಗೆಯ್ಯ ಗವಯ್‌ಗಳ ಮುಂದೆ ವಾದ್ಯಗಳನ್ನು ನುಡಿಸಿ ತೋರಿಸಲು ಅವರು ಸಂತೋಷಿಸಿ ಹಾಡಲು ಅಪ್ಪಣೆಮಾಡಿದರು. ದೇವೇಂದ್ರಪ್ಪನವರಿಗೆ ಶಾರೀರ ಒಡೆದಿತ್ತು. ಹಾಡಲು ಸಾಧ್ಯವಿಲ್ಲವಾಯಿತು. ಗದಿಗೆಯ್ಯನವರು ಕಿರಿಯ ಗಾಯಕನನ್ನು ಪ್ರೋತ್ಸಾಹಿಸಿ ಬಾಯಿ ಹಾಡುಗಾರಿಕೆಯನ್ನು ಅಭ್ಯಾಸಮಾಡೆಂದು ಹೇಳಿದರು. ಮೈಸೂರಿಗೆ ಹೋಗಿ ಹಾಡುವುದನ್ನು ಕಲಿಯಬೇಕೆಂದು ಉತ್ಕಟೇಚ್ಛೆಯುಂಟಾಯಿತು. ಮೈಸೂರಿಗೆ ಬಂದದ್ದೂ ಆಯಿತು – ವಿದ್ವಾಂಸರ ಮನೆಮನೆ ಅಲೆದದ್ದೂ ಆಯಿತು – ಗುರುಗಳು ಯಾರೂ ದೊರೆಯಲಿಲ್ಲ – ವೀಣೆ ಸುಬ್ಬಣ್ಣನವರು ಯಾವಾಗಲೊ ಕೃಪೆಮಾಡಿ ಒಂದು ವರ್ಣ, ಒಂದು ಸ್ವರಜತೆಯನ್ನು ಹೇಳಿಕೊಟ್ಟರು. ಬಿಡಾರದ ಕೃಷ್ಣಪ್ಪನವರು ಇವರ ಶಾರೀರವನ್ನು ಕೇಳಿ "ನಿನಗೆ ಬಾಯಿ ಹಾಡುಗಾರಿಕೆ ಸಾಧಿಸುವುದಿಲ್ಲ" ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು. ನಿರುತ್ಸಾಹ, ಬಡತನ, ಹಿರಿಯ ವಿದ್ವಾಂಸರ ತಿರಸ್ಕಾರ, ಇವುಗಳಿಗೆ ಸೋತು ನಿರುಪಾಯರಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಕ್ಕೂ ಯತ್ನಿಸಿದರು. ಆ ಮಧ್ಯೆ ಕೀರ್ತಿಶೇಷ ಸಂಗೀತರತ್ನ ಅಬ್ದುಲ್ ಕರೀಂಖಾನರ ಗಾನವನ್ನು ಪ್ರಿನ್ಸ್ ಗೋಪಾಲರಾಜ ಅರಸಿನವರ ಮನೆಯಲ್ಲಿ ಕೇಳುವ ಸುಯೋಗ ದೊರೆಯಲು ಚೆನ್ನಾಗಿ ಸಾಧನೆಮಾಡಿ ಶಾರೀರವನ್ನು ಸಂಪಾದಿಸಲೇಬೇಕೆಂದು ನಿಶ್ಚಯಿಸಿ ಪ್ರತಿದಿನ ಬೆಳಿಗ್ಗೆ ೩ ಗಂಟೆಗೆದ್ದು ಸಾಧನೆಗಾರಂಭಿಸಿದರು. ಇವರ ಶ್ರದ್ಧೆಯನ್ನು ಮೆಚ್ಚಿ ದಿವಂಗತ ಬಿ. ರಾಚಪ್ಪನವರು ಎರಡು ಕೀರ್ತನೆಗಳನ್ನೂ ವಿದ್ವಾನ್ ತಿಟ್ಟೆ ನಾರಾಯಣ ಅಯ್ಯಂಗಾರ್ಯರು ೩೫ ಕೀರ್ತನೆಗಳನ್ನೂ ಕಲಿಸಿಕೊಟ್ಟರು. ಬಿಡಾರದ ಕೃಷ್ಣಪ್ಪನವರಲ್ಲಿ ಕಲಿಯಬೇಕೆಂಬ ಆಸೆ ಉತ್ಕಟವಾಗಿತ್ತು. ಹೇಗೋ ಪ್ರಯತ್ನ ಮಾಡಿ ಅವರ ಶಿಷ್ಯವರ್ಗವನ್ನು ಸೇರಿದರು. ಆದರೆ ಅಲ್ಲಿ ಬಾಯಿ ಹಾಡುಗಾರಿಕೆ ಕಲಿಯಲಾಗಲಿಲ್ಲ. ಚೌಡಯ್ಯನವರ ಪಿಟೀಲಿನ ಜತೆಗೆ ಜಲತರಂಗದ ಅಭ್ಯಾಸ ಸಾಗಿತು. ಮನಸ್ಸಿನ ಅತೃಪ್ತಿ ಹರಿಯಲಿಲ್ಲ. ಕೊನೆಗೊಂದು ದಿವಸ ಕೇವಲ ನಿರುತ್ಸಾಹದಿಂದ ಮೈಸೂರನ್ನು ಬಿಟ್ಟು

ಬಿಡಲು ನಿಶ್ಚಯಿಸಿ ಕೃಷ್ಣಪ್ಪನವರನ್ನು ಕಂಡು, ಬೇಡಿ ಅವರ ಭಾವಚಿತ್ರವನ್ನು ತೆಗೆದುಕೊಂಡು ಊರಿಗೆ ಹೊರಟುಬಿಟ್ಟರು. ಮಾರನೆಯ ವರ್ಷ ಟೀಚರ್ಸ್ ಟ್ರೇನಿಂಗ್ ಸಲುವಾಗಿ ಶಿವಮೊಗ್ಗೆಗೆ ಹೋಗಿ ನಿಂತರು. ಸಂಗೀತದ ಅಭ್ಯಾಸವನ್ನು ಬಿಡದಿದ್ದರೂ ಅದನ್ನೇ ವೃತ್ತಿಯಾಗಿ ಮಾಡಿಕೊಳ್ಳುವ ಹಂಬಲ ದೂರವಾಗಿತ್ತು. ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಎಲ್ಲಿಯಾದರೂ ಶಾಲಾಶಿಕ್ಷಕನಾಗಿ ಜೀವನದ ಚರಿತಾರ್ಥವನ್ನು ಸಾಗಿಸೋಣ ಎಂದು ನಿರ್ಧರಿಸಿದ್ದರು. ಟ್ರೇನಿಂಗ್ ಶಾಲೆಯ ವಿದ್ಯಾರ್ಥಿಗಳ ಚಿತ್ತ ಪಾಠವನ್ನು ಬಿಟ್ಟು ದೇವೇಂದ್ರಪ್ಪನವರ ಗಾನದ ಕಡೆ ತಿರುಗಿತು. ಅದರ ಪರಿಣಾಮವಾಗಿ ಆ ವರ್ಷ ೬೦ ಜನ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಅಪಜಯ ಹೊಂದಿದರು. ಈ ಅಪಜಯದಿಂದ ದೇವೇಂದ್ರಪ್ಪನವರಿಗೆ ಜ್ಞಾನೋದಯವಾದಂತಾಯಿತು. ಸಂಗೀತವೇ ತಮ್ಮ ಜೀವನದ ಮಾರ್ಗವೆಂದರಿತು ಅದಕ್ಕೇ ಹೆಚ್ಚು ಲಕ್ಷ್ಯ ಕೊಡಲಾರಂಭಿಸಿದರು. ಸಾಧನೆಯ ಆವೇಗವನ್ನು ತಡೆಯದ ದೇಹ ಡಬ್ಬಲ್ ನ್ಯೂಮೋನಿಯಾ ಬೇನೆಗೆ ಈಡಾಗಬೇಕಾಯಿತು. ಅದರಿಂದ ಪಾರಾಗಿ ಮಾರನೆಯ ವರ್ಷ (೧೯೨೨) ಮತ್ತೆ ಮೈಸೂರಿಗೆ ಬಂದರು. ಈ ಸಲ ಮೈಸೂರನ್ನು ಗೆದ್ದೇ ಹೋಗುವುದೆಂದು ನಿಶ್ಚಯಿಸಿದರು. ವಿಶೇಷ ಪ್ರಯತ್ನಮಾಡಿ ಮಹಾಸ್ವಾಮಿಗಳವರ ವರ್ಧಂತಿಕಾಲದಲ್ಲಿ ಅವರ ಮುಂದೆ ತಮ್ಮ ಜಲತರಂಗವನ್ನು ನುಡಿಸುವ ಅವಕಾಶವನ್ನು ಕಲ್ಪಿಸಿಕೊಂಡರು. ದೇವೇಂದ್ರಪ್ಪನವರ ವಾದ್ಯವಾದನ ಪ್ರಭುಗಳ ಚಿತ್ತಕ್ಕೆ ಬಂದು 'ನೀವು ಯಾರ ಶಿಷ್ಯಂದಿರು' ಎಂದು ಕೇಳಿದುದಕ್ಕೆ ದೇವೇಂದ್ರಪ್ಪನವರು ಕೃಷ್ಣಪ್ಪನವರ ಕಡೆ ಕೈ ತೋರಿಸಿ 'ನನ್ನ ಗುರುಗಳು' ಎಂದು ಹೇಳಿದರು. ಕೃಷ್ಣಪ್ಪನವರೂ ಅವಾಕ್ಕಾದರು. ದೇವೇಂದ್ರಪ್ಪನವರ ಸೌಜನ್ಯ ಸಂಗೀತಕೇಸರಿಯ ಹೃದಯವನ್ನು ಗೆದ್ದುಬಿಟ್ಟಿತು. ಮಹಾಸ್ವಾಮಿಯವರು ದೇವೇಂದ್ರಪ್ಪನವರನ್ನು ಆಸ್ಥಾನ ವಿದ್ವಾಂಸರನ್ನಾಗಿ ಅಂದಿನಿಂದಲೇ ನಿಯಮಿಸಿದರು. ಕೃಷ್ಣಪ್ಪನವರು ತಮ್ಮ 'ಏಕಲವ್ಯ'ನನ್ನು ಪರಿಗ್ರಹಿಸಿದರು. ಅಪಾರ ಔದಾರ್ಯದಿಂದ ಶಿಷ್ಯನಿಗೆ ಹೃದಯಬಿಚ್ಚಿ ವಿದ್ಯಾದಾನಮಾಡಿದರು. ತಾವು ಒಂದು ಸಂಗತಿ ಹಾಡುವುದು, ಶಿಷ್ಯನ ಕೈಲಿ ಹಾಡಿಸಿ ವಿಸ್ತರಿಸು

ವುದು. ಅದನ್ನು ತಿದ್ದಿ ತಾವು ವಿಸ್ತರಿಸಿ ತೋರಿಸುವುದು ಹೀಗೆ ಅಭ್ಯಾಸ ಮಾಡಿಸಿದರು.

ಬಾಯಿಹಾಡುಗಾರಿಕೆಯಲ್ಲಿ ದೇವೇಂದ್ರಪ್ಪನವರಿಗೆ ನಿಷ್ಣಾತತೆಯಿರುವಂತೆ ಅನೇಕ ವಾದ್ಯವಾದನದಲ್ಲಿಯೂ ತುಂಬು ಪಾಂಡಿತ್ಯವಿದೆ. ಪಿಟೀಲು, ವೀಣೆ, ಜಲತರಂಗ, ದಿಲ್‌ರುಬಾ, ಸಿತಾರು ವಾದ್ಯಗಳನ್ನು ಚೆನ್ನಾಗಿ ನುಡಿಸುತ್ತಾರೆ. ಆ ವಾದ್ಯಗಳ ಕಛೇರಿ ನಡೆಸುವಷ್ಟು ಪಾಂಡಿತ್ಯವನ್ನು ದೊರಕಿಸಿಕೊಂಡಿದ್ದಾರೆ. ಯಾವ ವಾದ್ಯವಾಗಲಿ ಅದರ ಸೂಕ್ಷ್ಮ ತತ್ವವನ್ನರಿತು ಕೆಲವು ದಿವಸಗಳಲ್ಲಿ ಚೆನ್ನಾಗಿ ನುಡಿಸುವಷ್ಟು ಪ್ರಾವೀಣ್ಯತೆ ದೇವೇಂದ್ರಪ್ಪನವರಲ್ಲಿ ಕಂಡುಬರುತ್ತದೆ.

ಅಲ್ಲಿಂದ ಇಡೀ ಹಿಂದೂಸ್ಥಾನವನ್ನೇ ಸುತ್ತಿ ಕನ್ನಡ ನಾಡಿನ ಕೀರ್ತಿಯನ್ನು ಬೆಳಸಿದ್ದಾರೆ. ಬೆಳಗಾಂವಿ, ಪುಣೆ, ಮುಂಬಯಿ, ಹೈದರಾಬಾದುಗಳಲ್ಲದೆ ದಕ್ಷಿಣದಲ್ಲಿ ಕುಂಭಕೋಣ, ಮದರಾಸು, ತಿರುಚನಾಪಳ್ಳಿ, ಕಣ್ಣಾನ್ನೂರು, ಆಂಧ್ರದೇಶದ ಮುಖ್ಯ ಪಟ್ಟಣಗಳು ಎಲ್ಲ ಕಡೆಯಲ್ಲಿಯೂ ದೇವೇಂದ್ರಪ್ಪನವರ ಹಾಡುಗಾರಿಕೆಯ ಕೀರ್ತಿ ಹಬ್ಬಿದೆ. ಕಳೆದ ಎರಡು ವರ್ಷಗಳು ತಂಜಾವೂರಿನಲ್ಲಿಯೇ ಇದ್ದುಕೊಂಡು ಕರ್ನಾಟಕದ ಹಿರಿಮೆಯನ್ನು ತಮಿಳುನಾಡಿನಲ್ಲೆಲ್ಲಾ ಸ್ಥಾಪಿಸಿ ಬಂದಿದ್ದಾರೆ. ಮದರಾಸಿನಲ್ಲಿ ದಿವಂಗತ ಸಂಗೀತಾಚಾರ್ಯ ಸಿ. ಆರ್. ಶ್ರೀನಿವಾಸ ಅಯ್ಯಂಗಾರ್ಯರು ವಿದ್ವತ್ಸಭೆ ಸೇರಿಸಿ 'ಗಾಯಕರತ್ನ' ಎಂಬ ಬಿರುದನ್ನು ದಯಪಾಲಿಸಿದರು. ಹೀಗೇ ಹೈದರಾಬಾದಿನಲ್ಲಿ 'ರಾಗಾಲಾಪನಚತುರ' ಬಳ್ಳಾರಿಯಲ್ಲಿ 'ಗಾನಕೇಸರಿ' ರಂಭಾಪುರಿ ಸ್ವಾಮಿಗಳವರಿಂದ 'ಗಾನಾಲಂಕಾರ' ಮೊದಲಾದ ಬಿರುದುಗಳು ದೇವೇಂದ್ರಪ್ಪನವರಿಗೆ ಬಂದಿವೆ. ಕಳೆದವರ್ಷ ಆಳುವ ಮಹಾಸ್ವಾಮಿಗಳವರು ಎರಡು ಸಲ ದೇವೇಂದ್ರಪ್ಪನವರ ಗಾನವನ್ನು ಕೇಳಿ ತಮ್ಮ ಪ್ರೋತ್ಸಾಹವನ್ನು ಅನುಗ್ರಹಿಸಿದರು.

ದೇವೇಂದ್ರಪ್ಪನವರು ಎಷ್ಟು ದೊಡ್ಡ ಕಲಾವಿದರೋ ಅಷ್ಟೇ ದೊಡ್ಡ ಮನುಷ್ಯರೂ ಆಗಿದ್ದಾರೆ. ಸ್ವಯಂ ಸಂಗೀತಗಾರರಾದರೂ ಇತರ ಸಂಗೀತಗಾರರನ್ನು ಮೆಚ್ಚುವ ವಿದ್ವತ್ಪ್ರೇಮವಿದೆ. ಹೊರಗಿನಿಂದ ಬರುವ ವಿದ್ವಾಂಸರಿಗೆ ಎಲ್ಲ ರೀತಿಯಲ್ಲಿಯೂ ಮೈಸೂರಿನಲ್ಲಿ ನೆರವಾಗುತ್ತಿರುವ ಮಹನೀಯರ

ಪೈಕಿ ದೇವೇಂದ್ರಪ್ಪನವರೊಬ್ಬರು. ಹಿಂದೊಮ್ಮೆ ಗುರುಶಾಂತಯ್ಯನೆಂಬ ಅಂಥ ಗಾಯಕರು ಮೈಸೂರಿಗೆ ಬಂದರು. ಪ್ರೋತ್ಸಾಹಕ್ಕಾಗಿ ಮೈಸೂರಿನ ವಿದ್ವನ್ಮಣಿಗಳ ಮನೆ ಬಾಗಿಲು ಕಾದು ಕಾದು ಅವರಿಗೆ ಸಾಕಾಯಿತು. ನನಗೆ ಸುದ್ದಿ ಗೊತ್ತಾಗಿ ನಾನು ದೇವೇಂದ್ರಪ್ಪನವರಲ್ಲಿ ಅವರನ್ನು ಕಳುಹಿಸಿ ಕೊಟ್ಟೆ. ಶ್ರೀಯುತರು ಗುರುಶಾಂತಯ್ಯನವರಿಗೆ ಎಲ್ಲ ಸೌಕರ್ಯಗಳನ್ನೂ ಕಲ್ಪಿಸಿಕೊಟ್ಟು ವಾದ್ಯಗಾರರ ನೆರವನ್ನೂ ಇತ್ತು ಅರಮನೆಯಲ್ಲಿ ಕಛೇರಿ ಮಾಡಿಸಲು ಪ್ರಯತ್ನಿಸಿ ಕೃತಕೃತ್ಯರಾದರು. ತಿಂಗಳುಗಟ್ಟಳೆ ತಮ್ಮ ಮೃದಂಗ ವಾದ್ಯಗಾರನನ್ನು ಗುರುಶಾಂತಯ್ಯನವರ ಸಹಾಯಕ್ಕೆಂದು ಕಳುಹಿಸಿಕೊಟ್ಟು ಉಪಕಾರ ಮಾಡಿದರು. ಇವರ ಕಲಾಮಹತಿಗೆ ವಿಶುದ್ಧಾಂತಃಕರಣ, ಸರಳ ಜೀವನ ಹಾಗೂ ವಿದ್ವತ್ಪ್ರೇಮಗಳೇ ಕಾರಣಗಳೆಂದರೆ ತಪ್ಪಾಗದು.

ತಾವು ವಿದ್ಯಾರ್ಜನೆಗೆ ಪಟ್ಟ ಶ್ರಮವನ್ನು ದೇವೇಂದ್ರಪ್ಪನವರು ಎಳ್ಳಷ್ಟು ಮರೆತಿಲ್ಲ. ಇಂದು ಮೈಸೂರಿನಲ್ಲಿ ಇವರ ಶಿಷ್ಯರ ಬಳಗ ಶಿಷ್ಯಕೋಟಿಯೇ ಆಗಿದೆ. ಶಿಷ್ಯರನ್ನು ಮಕ್ಕಳೆಂದು ಭಾವಿಸಿ ಸ್ವಶ್ರಮವನ್ನು ಪರಿಗಣಿಸದೆ ತಮ್ಮ ವಿದ್ಯೆಯನ್ನು ನಿರ್ವಂಚನೆಯಿಂದ ಧಾರೆಯೆರೆಯುತ್ತಿರುವವರಲ್ಲಿ ದೇವೇಂದ್ರಪ್ಪನವರಿಗೆ ಅಗ್ರ ತಾಂಬೂಲ ಸಲ್ಲಬೇಕಾಗಿದೆ. ಈ ವಿಷಯದಲ್ಲಿ ಇವರು ತಮ್ಮ ಗುರುಗಳ ಔದಾರ್ಯ ಪರಂಪರೆಯನ್ನು ಪೋಷಿಸಿಕೊಂಡು ಬರುತ್ತಿದ್ದಾರೆ. ಇವರ ಶಿಷ್ಯರಲ್ಲಿ ಚಕ್ರಕೋಡಿ ನಾರಾಯಣಶಾಸ್ತ್ರಿ, ಗೋವಿಂದಸ್ವಾಮಿ, ವಾಸುದೇವಮೂರ್ತಿ, ಶ್ರೀನಿವಾಸಮೂರ್ತಿ, ಲಕ್ಷ್ಮೀದಾಸ್, ಉಮಾಪತಿ, ಭೀಮಾಚಾರ್ಯ ಮೊದಲಾದವರು ಉತ್ತಮ ಗಾಯಕರಾಗಿದ್ದಾರೆ; ಸುಬ್ರಹ್ಮಣ್ಯಂ, ಶಿವರಾಮಯ್ಯ ಉತ್ತಮ ಪಿಟೀಲು ವಾದ್ಯಗಾರರಾಗಿದ್ದಾರೆ; ರಾಮರಾವ್ ಉತ್ತಮ ಮೃದಂಗ ವಾದ್ಯವಾದನಗಾರರಾಗಿದ್ದಾರೆ. ಇಂದಿಗೂ ಅವರ ಮನೆ ಸಂಗೀತದ ವಿಶ್ವವಿದ್ಯಾನಿಲಯವಾಗಿದೆ.

"ಕರ್ನಾಟಕ ಸಂಗೀತ"ಕ್ಕೆ "ಕರ್ನಾಟಕತ್ವ" ವನ್ನು ಕೊಟ್ಟಕೀರ್ತಿ ಕೀರ್ತಿಶೇಷ ಬಿಡಾರದ ಕೃಷ್ಣಪ್ಪನವರದು. ಅವರ ಶಿಷ್ಯರಾದ ದೇವೇಂದ್ರಪ್ಪನವರು ಅದನ್ನು ದಶದಿಕ್ಕುಗಳಿಗೂ ಹರಡಿದ್ದಾರೆ. ದಾಸರ ಪದಗಳನ್ನೂ

ಶಿಶುನಾಳ ಷರೀಫ ಸಾಹೇಬರ ಕೀರ್ತನೆಗಳನ್ನೂ ಘನವಾಗಿ ಹಾಡುತ್ತಾರೆ. ಕನ್ನಡ ಕೀರ್ತನೆಗಳಲ್ಲಿಯೇ ಕಛೇರಿಯನ್ನು ಮಾಡುವ ಸಾಮರ್ಥ್ಯವಿದೆ. ಸಂಗೀತಶಾಸ್ತ್ರರತ್ನ ವಾಸುದೇವಾಚಾರ್ಯರ ಕೀರ್ತನೆಗಳು, ಗಾಯಕ ಶಿಖಾ ಮಣಿ ಮುತ್ತಯ್ಯಭಾಗವತರ ಕೀರ್ತನೆಗಳನ್ನು ಇವರಷ್ಟು ಅರ್ಥ ಭಾವ ಪೂರ್ಣವಾಗಿ ಯಾರೂ ಹಾಡುವುದಿಲ್ಲ. ಯಾವ ಕೀರ್ತನೆಯನ್ನು ತೆಗೆದು ಕೊಂಡರೂ ಅದನ್ನು ಅರ್ಥಪೂರ್ಣವಾಗಿಯೂ ಶುದ್ಧವಾಗಿಯೂ ಹಾಡು ವುದು ಇವರ ವಿಶೇಷ. ವಿನ್ಯಾಸಮಾಡುವಾಗಿಯಾಗಲಿ, ಪ್ರಸ್ತಾರಕ್ಕೆ ನಿಲ್ಲುಗಡೆಯನ್ನು ಕೊಡುವಾಗಲಾಗಲೀ ಸಾಹಿತ್ಯ ಆಭಾಸ ಹೊಂದುವುದಿಲ್ಲ. ಕೀರ್ತನೆಗಳಿಗೂ ಅವುಗಳ ರಾಗಗಳಿಗೂ ಹೊಂದಿಕೆಯಾಗುವಷ್ಟು ಸ್ವರ ಪ್ರಸಾರವನ್ನು ಹಾಕುತ್ತಾರೆ. ಒಟ್ಟಿನಲ್ಲಿ ಸ್ವರದ ಹೋರಾಟಕ್ಕಿಂತಲೂ ರಾಗ ರಸಗಳ ಕಡೆಗೆ ದೇವೇಂದ್ರಪ್ಪನವರ ಲಕ್ಷ್ಯ ಹೆಚ್ಚು.

ದೇವೇಂದ್ರಪ್ಪನವರು ಶ್ರೀ ರಾಮಕೃಷ್ಣ ಪರಮಹಂಸರ ಶಿಷ್ಯ ಕೋಟಿಗೆ ಸೇರಿದವರಾಗಿರುತ್ತಾರೆ. ಗುರುದೇವರ ಮೇಲೆ ತಾವೇ ಕೆಲವು ಕೃತಿಗಳನ್ನು ರಚಿಸಿದ್ದಾರೆ. ಅವರ ಗಾನದ ಮೇಲೆ ಈ ಆಧ್ಯಾತ್ಮಿಕ ಪ್ರವೃತ್ತಿಯ ಛಾಯೆಯೂ ಕಂಡು ಬರುತ್ತದೆ.

ಮಂಗಳೂರು, ಬಳ್ಳಾರಿ, ಹೊಸಕೋಟೆ ಮೊದಲಾದ ಕನ್ನಡ ನಾಡಿನ ಬೇರೆ ಬೇರೆ ಭಾಗಗಳಲ್ಲಿ ದೇವೇಂದ್ರಪ್ಪನವರ ಹೆಸರು ಮನೆಯ ಮಾತಾಗಿದೆ.

ಇಂಥಹ ವಿದ್ವಾಂಸರು ನಮ್ಮಲ್ಲಿ (ಏಕೆ, ಎಲ್ಲ ಕಡೆಯಲ್ಲಿಯೂ) ವಿರಳ. ಜೀವನ, ಕಲೆ ಎರಡರಲ್ಲಿಯೂ ಒಂದು ಮೇಲ್ಮಟ್ಟನ್ನು ಮುಟ್ಟಿ ಬಾಳನ್ನು ಕಲಾ ಸೇವೆಯಲ್ಲಿ ತೇಯುವವರಿಂದಲೇ ಅಲ್ಲವೇ ನಾಡೂ ಅದರ ಸಂಸ್ಕೃತಿಯೂ ಬೆಳೆಯುವುದು.

———



ಕೇಶವಮೂರ್ತಿ

[ಪುಟ ೩೫

## ೬. ವೀಣೆ ಕೇಶವಮೂರ್ತಿ

"The Vina occupies the first place among them (musical intruments of India) all; and has done so from time immemorial. It is also the instrument par excellance for rendering Indian Music; and no one who has not heard the masters of the Vina has any right to give a final judgement on Indian Music."

"The Indian Music"—p 109
Rev H. A. Popley.

ಭಾರತೀಯ ಸಂಗೀತದಲ್ಲಿ ಉತ್ತರ ದಕ್ಷಿಣ ಸಂಪ್ರದಾಯಗಳು ಸ್ಥಿರವಾದ ಮೇಲೆ ಪರಸ್ಪರ ಮಿಳನ, ರಸಾಸ್ವಾದನಗಳು ದೂರವಾದವು. ಉತ್ತರದವರ ಸಂಗೀತ ದಕ್ಷಿಣದವರಿಗೆ ಹಿಡಿಸದಾಯಿತು; ದಕ್ಷಿಣದವರ ಸಂಗೀತ ಉತ್ತರದವರಿಗೆ ಕರ್ಕಶವಾಗಿ ಕಾಣಬರತೊಡಗಿತು. ಆದರೆ ಒಬ್ಬೊಬ್ಬ ಉತ್ತರ ದಕ್ಷಿಣಾದಿ ವಿದ್ವಾಂಸರು ಈ ಪ್ರಾಂತಿಕ ರುಚಿ ಮಿತಿಯನ್ನು ಜಯಿಸಿ ತಮ್ಮ ಕಲೆಯ ಕಡೆಗೆ ಜನತೆಯನ್ನು ಎಳೆಯಲು ಸಮರ್ಥರಾಗುತ್ತಾರೆ. ಅವರ ಕಲೆಯ ಸಾರ ಸರ್ವಸ್ವವೂ ಶಾಸ್ತ್ರ ಪ್ರೌಢಿಮೆಯೂ ಜನತೆಗೆ ಅರಿವಾಗದಿದ್ದರೂ ರಸರಂಗದಲ್ಲಿ ಜನತೆ ತನ್ನ ಪ್ರೇಮ ಭಕ್ತಿಗಳನ್ನು ಸಲ್ಲಿಸುತ್ತದೆ. ಈ ರೀತಿ ಚಿತ್ತವನ್ನು ಅಪಹರಿಸಿ ರಸಾನುಭವವನ್ನುಂಟುಮಾಡುವ ಕಲೆಯನ್ನೇ ತಿಳಿದವರು ಉತ್ತಮ ಕಲೆಯೆಂದು

ಪರಿಗ್ರಹಿಸುವುದು. ಮೈಸೂರಿನ ವೀಣೆ ಕೇಶವಮೂರ್ತಿಗಳು ಈ ಸಂಪ್ರದಾಯಕ್ಕೆ ಸೇರಿದ ವಿದ್ವಾಂಸರು. ಮುಂಬಯಿ, ಕಲ್ಕತ್ತೆ, ಹೈದರಾಬಾದು. ಪ್ರಾಂತ್ಯಗಳಲ್ಲಿ ಇವರು ಕರ್ನಾಟಕ ಸಂಗೀತದ ಗಂಧವನ್ನರಿಯದ ಜನತೆಯನ್ನು ತಮ್ಮ ವೀಣಾವಾದನದಿಂದ ತಣಿಸಿ ಬಂದಿರುವುದೇ ಇದಕ್ಕೆ ಸಾಕ್ಷಿ. ಹೈದರಾಬಾದಿನಲ್ಲಿ ಯುವರಾಜರೇ ಆದಿಯಾಗಿ ಅನೇಕ ಮುಸಲ್ಮಾನ ನವಾಬರು ಕೇಶವಮೂರ್ತಿಗಳ ವೀಣಾವಾದನಕ್ಕೆ ಮರುಳಾಗಿರುವುದನ್ನು ನಾನು ಬಲ್ಲೆ.

ಕೇಶವಮೂರ್ತಿಗಳಿಗೆ ಈ ಅಭಿರುಚಿ ರಕ್ತಗತವಾಗಿ ಬಂತೆಂದರೂ ತಪ್ಪಾಗಲಾರದು. ಇವರ ತಂದೆ ವೀಣೆ ಸುಬ್ಬರಾಯರು, ಚಿಕ್ಕಪ್ಪ ವೀಣೆ ವೆಂಕಟರಮಣಯ್ಯನವರು, ತಾತಂದಿರು ರಂಗಪ್ಪನವರು ಎಲ್ಲರೂ ಪ್ರಸಿದ್ಧ ವೈಣಿಕರು. ಏಳೆಂಟು ತಲೆಮಾರುಗಳಿಂದ ವೈಣಿಕಕಲೆ ಕೇಶವಮೂರ್ತಿಗಳ ಮನೆಯಲ್ಲಿ ನಡೆದು ಬರುತ್ತಿದೆ. ಇವರ ಮನೆತನದವರು ಮೈಸೂರು ಆಸ್ಥಾನ ವಿದ್ವಾಂಸರಾಗಿ ಖ್ಯಾತಿಗಳಿಸಿದರು. ತಾಯಿಯ ಕಡೆ ಅನೇಕರು ಹಾಡುಗಾರರಾಗಿದ್ದರು. ಕೇಶವಮೂರ್ತಿಗಳ ಜೀವನ ಸಾಗರಕ್ಕೆ ತುಂಗ, ಭದ್ರೆಗಳಂತೆ ಎರಡು ಕಡೆಯಿಂದಲೂ ಸಂಗೀತ ಕಲೆಯು ಬಂದು ಸೇರಿದೆ.

ಹೊಯ್ಸಳ ಶಿಲ್ಪ ಕಲೆಯ ಸಿರಿನಾಡೆನಿಸಿದ ಬೇಲೂರಿನಲ್ಲಿ ಕೇಶವಮೂರ್ತಿಗಳು ೧೯೦೩ರಲ್ಲಿ ಜನಿಸಿದರು. ಚಿಕ್ಕಮಗಳೂರಿನಲ್ಲಿ ವಿದ್ಯಾಭ್ಯಾಸವನ್ನು ಸಾಗಿಸಿ ೫ನೆಯ ಫಾರಂ ತನಕ ಮುಟ್ಟಿದರು. ಈ ಲೌಕಿಕ ವಿದ್ಯೆಯ ಕಡೆ ಕೇಶವಮೂರ್ತಿ ಹೋದದ್ದು ನೋಡಿ ಅವರ ಚಿಕ್ಕಪ್ಪ ವೆಂಕಟರಮಣಯ್ಯನವರಿಗೆ ಬಹಳ ವ್ಯಸನವಾಯಿತು. ಪರಂಪರೆಯಿಂದ ಬಂದ ಈ ವೈಣಿಕ ವಿದ್ಯೆ ಇಲ್ಲಿಗೇ ಮುಗಿದು ಹೋಗುವುದಲ್ಲಾ ಎಂದು ಅವರು ಬಹಳ ಸಂತಾಪಪಟ್ಟು ಕೇಶವಮೂರ್ತಿಗಳಿಗೆ ವೀಣೆ ಪಾಠವನ್ನು ಹೇಳಲಾರಂಭಿಸಿದರು. ಕೇಶವಮೂರ್ತಿಗಳಿಗೆ ೧೫ನೆಯ ವಯಸ್ಸಿನಿಂದ ನಾಲ್ಕು ವರ್ಷಕಾಲ ವೆಂಕಟರಮಣಯ್ಯನವರ ಶಿಕ್ಷಣ ದೊರೆಯಿತು. ಕಾರಣಾಂತರಗಳಿಂದ ೧೯ನೆಯ ವಯಸ್ಸಿನಲ್ಲಿ ಊರನ್ನು ಬಿಡಬೇಕಾಗಿ ಬಂದು ಕೇಶವಮೂರ್ತಿಗಳು ಮೈಸೂರನ್ನು ಸೇರಿದರು. ಅಲ್ಲಿ ನಾಯಬ

ಸುಬ್ಬರಾಯರೆಂಬ ಶ್ರೀಮಂತರು ತರುಣ ವಿದ್ವಾಂಸನ ಮೇಲೆ ಕರುಣೆಯಿಟ್ಟು, ಆತನಿಗೆ ಆಶ್ರಯವಿನ್ನಿತ್ತು ವೈಣಿಕ ಶಿಖಾಮಣಿ ಸುಬ್ಬಣ್ಣನವರ ಗುರುತ್ವ ಲಭಿಸುವಂತೆ ಮಾಡಿದರು.

ಆರು ವರ್ಷಕಾಲ ಸುಬ್ಬಣ್ಣನವರಲ್ಲಿ ಶಿಕ್ಷಣ ಸಾಗಿತು. ಅನಂತರ ಸುಬ್ಬಣ್ಣನವರು ಒಂದು ದಿನ ಆಸ್ಥಾನದ ವಿದ್ವಾಂಸರು, ಊರಿನ ದೊಡ್ಡ ಮನುಷ್ಯರು, ರಸಿಕರು ಎಲ್ಲರನ್ನೂ ಬರಮಾಡಿ ಲಕ್ಷ್ಮೀವಿಲಾಸ ಅಗ್ರಹಾರದಲ್ಲಿದ್ದ ತಮ್ಮ ಮನೆಯಲ್ಲಿ ಶಿಷ್ಯನ ಕಛೇರಿ ಮಾಡಿಸಿ ಅವನನ್ನು ಹರಸಿ ಅನುಗ್ರಹಿಸಿದರು. ಮಾರನೆಯ ವರ್ಷ ಕೇಶವಮೂರ್ತಿಗಳು ಉತ್ತರ ಹಿಂದೂಸ್ಥಾನದ ಪ್ರವಾಸವನ್ನಾರಂಭಿಸಿ ಮುಂಬಯಿ, ಪುಣೆ, ಸತಾರ, ಬರೋಡ, ಅಹಮದಾಬಾದ್, ಪಾಲನ್‌ಪುರ ಮೊದಲಾದ ಸ್ಥಳಗಳಲ್ಲಿ ಎಂಟು ತಿಂಗಳು ಕಾಲ ಸಂಚರಿಸಿ ಉತ್ತರ ಹಿಂದೂಸ್ಥಾನದ ಕಲಾವಿದರ ಮೇಲೆ ಕನ್ನಡ ಸಂಸ್ಕೃತಿಯ ಪ್ರಭಾವವನ್ನು ಬೀರಿ ಬಂದರು.

ಮುಂಬಯಿಯ ಕೃಷ್ಣವಿಜಯ ಕ್ಲಬ್ಬಿನಲ್ಲಿ ಬಾಯಿ ಕೇಸರಿಬಾಯಿಯವರ ಗಾನವಿದ್ದ ದಿವಸವೇ ಕೇಶವಮೂರ್ತಿಗಳಿಗೆ ವೀಣಾವಾದನಕ್ಕೆ ಅವಕಾಶ ದೊರೆಯಿತು. ತಮ್ಮ ಅಪ್ರತಿಮ ಕಲೆಗಾರಿಕೆಯಿಂದ ಆ ಸಂಗೀತ ಸರಸ್ವತಿಯ ವಿಶ್ವಾಸಗೌರವಗಳನ್ನು ದೊರಕಿಸಿಕೊಂಡರು. ಕೇಸರಿಬಾಯಿಯವರಿಂದ ಖಾನ್ ಸಾಹೇಬ್ ಮಂಜೀಖಾನರ ಪರಿಚಯವಾಗಲು, ಮಂಜೀಖಾನರು ಕೇಶಮೂರ್ತಿಗಳ ವೀಣಾವಾದನವನ್ನು ಕೇಳಿ ಮೆಚ್ಚಿ "ಶ್ರೀ ಆರ್ಟ್ಸ್ ಸರ್ಕಲ್"ನಲ್ಲಿ ಕಛೇರಿ ಮಾಡಿಸಲು ವಾಗ್ದಾನ ಮಾಡಿದರು. ಸರ್ಕಲಿನ ಕಾರ್ಯದರ್ಶಿಯಾದ ಅತೀಯಾ ಬೇಗಂ ಮೊದಲು ಇವರ ಕಛೇರಿಗೆ ಒಪ್ಪಲಿಲ್ಲ. ಸರ್ಕಲ್ ಗಾನಗಳಿಗೆ ಬರುವವರೆಲ್ಲಾ ರಾಜರಾಜರುಗಳು, ಇವರ ವಾದ್ಯವಾದನ ಕೆಟ್ಟುಹೋದರೆ ತಮಗೆ ಅವಮಾನವಾಗುತ್ತದಲ್ಲಾ ಎಂದು ಹಿಂಜರಿದರು. ಕೊನೆಗೆ ಮಂಜೀಖಾನರ ಬಲವಂತಕ್ಕೆ ಒಪ್ಪಿದರು. ಕಛೇರಿ ಮುಗಿಯುವ ಹೊತ್ತಿಗೆ ಅತೀಯ ಮುಗ್ಧಳಾಗಿ ಹೋಗಿ ಬಿಟ್ಟಿದ್ದಳು. ಮುಂದೆ ತಾನೇ ಉತ್ಸಾಹ ತೆಗೆದುಕೊಂಡು ಮತ್ತೆ ಮೂರು ಕಛೇರಿಗಳನ್ನು ವ್ಯವಸ್ಥೆಮಾಡಿ ತರುಣ ವಿದ್ವಾಂಸರಿಗೆ ಉತ್ತರ ಹಿಂದೂಸ್ಥಾನದ ಅನೇಕ ರಾಜರ ಪರಿಚಯ ಮಾಡಿಕೊಟ್ಟಳು.

ಪಾಲನಪುರದ ರಾಜರಿಗೂ ಕೇಶವಮೂರ್ತಿಗಳಿಗೂ ನಿಕಟ ಸ್ನೇಹ ಬೆಳೆಯಿತು.

ಅದೇ ಕಾಲದಲ್ಲಿಯೇ ಮಹಾತ್ಮಾ ಗಾಂಧಿಯವರ ಮುಂದೆ ವೀಣೆ ನುಡಿಸುವ ಸಂಧಿ ಲಭಿಸಿತು. ರಾತ್ರಿ ೧೦-೩೦ ಆಗಿದ್ದರೂ ಸುಮಾರು ಎರಡು ಗಂಟೆಗಳ ಕಾಲ ಮಹಾತ್ಮಾಜೀಯವರು ಕೇಶವಮೂರ್ತಿಗಳ ವೀಣಾವಾದನವನ್ನು ಕೇಳಿ ಆನಂದಿಸಿದರು. ಮಾರನೆಯ ವರ್ಷ ಹೈದರಾಬಾದಿಗೆ ಮತ್ತೆ ಹೋಗಿ ೧೦-೧೫ ಕಛೇರಿಗಳನ್ನು ನಡೆಸಿ ಬಂದರು. ಅಲ್ಲಿನ ಪ್ರಸಿದ್ಧ ಶ್ರೀಮಂತರಾದ ಧನರಾಜ ಗಿರ್ಜಿಯವರ ಮನೆಯಲ್ಲಿ ಕವಿಗುರು ರವೀಂದ್ರನಾಥ ಠಾಕೂರರಿಗೆ ಔತಣವೇರ್ಪಟ್ಟಿತು. ತೋಟದಲ್ಲಿ ಗಿರ್ಜಿಯವರೂ, ಠಾಕೂರರೂ, ಕಿಶನ್ ಪ್ರಸಾದರೂ ಕುಳಿತಿದ್ದರು. ಅವರ ಮುಂದೆ ವೀಣೆ ನುಡಿಸಬೇಕಾಗಿತ್ತು. ಠಾಕೂರರು "ವೀಣೆಗೆ ತೋಟ ಸ್ಥಳವಲ್ಲ, ಒಳಕ್ಕೆ ಹೋಗಿ ಕೋಣೆಯಲ್ಲಿ ಕುಳಿತು ಕೇಳುವ" ಎಂದು ಸೂಚಿಸಿದರು. ಒಂದು ಗಂಟೆಕಾಲ ತಲ್ಲೀನರಾಗಿ ಕೇಳಿ ತುಂಬ ಸಂತೋಷಿಸಿ "ನೀವು ಶಾಂತಿನಿಕೇತನಕ್ಕೆ ಬರಬೇಕು. ಕೆಲಕಾಲವಾದರೂ ಅಲ್ಲಿದ್ದು, ನಮ್ಮವರಿಗೆ ವೀಣೆ ನುಡಿಸುವುದನ್ನು ಹೇಳಿಕೊಟ್ಟು ಬರಬೇಕು" ಎಂದು ಆದರದಿಂದ ಸ್ವಾಗತಿಸಿದರು. ಹೈದರಾಬಾದಿನ ರಾಜಕುಮಾರರ ಮುಂದೆ ಕಛೇರಿ ಮಾಡಿ ಅನೇಕ ಪ್ರಶಸ್ತಿ ಪಾರಿತೋಷಿಕಗಳನ್ನು ಪಡೆದು ಬಂದರು.

೧೯೩೧ ಜನವರಿ ತಿಂಗಳಲ್ಲಿ ಆಳುವ ಮಹಾಸ್ವಾಮಿಯವರು ಕೇಶವಮೂರ್ತಿಗಳ ವೀಣಾವಾದನವನ್ನು ಮೂರು ಸಲ ಕೇಳಿ ಸಂತೋಷಿಸಿ ಅರಮನೆಯ ವಿದ್ವಾಂಸರನ್ನಾಗಿ ನೇಮಕ ಮಾಡಿದರು. ಭಾರತೀಯ ಸಂಗೀತ ಪದ್ಧತಿಯ ಜತೆಗೆ ಪಾಶ್ಚಾತ್ಯ ಪದ್ಧತಿಯೂ ಗೊತ್ತಿರಬೇಕೆಂದು ಕೇಶವಮೂರ್ತಿಗಳಿಗೆ ಅದರ ಪರಿಚಯವನ್ನು ತಿಳಿದ ವಿದೇಶೀಯ ವಿದ್ವಾಂಸರಿಂದ ಮಾಡಿಸಿಕೊಟ್ಟಿರುತ್ತಾರೆ.

ಕೇಶವಮೂರ್ತಿಗಳ ವಾದ್ಯವಾದನದಲ್ಲಿ ಕೆಲವು ಹೆಚ್ಚಿನ ಗುಣಗಳಿವೆ. ಅವರ ವೀಣೆಯೇ ಒಂದು ಅಪರೂಪವಾದ ವಸ್ತು. ನಾದ ಸೌರಭ

ತುಂಬಿ ಬರುತ್ತದೆ. ದೊಡ್ಡ ಸಭಾ ಮಂದಿರದಲ್ಲಿ ಕೂಡ ಸ್ಪಷ್ಟವಾಗಿ ಕೇಳಿಸುವಷ್ಟು ನಾದ ಸಂಪತ್ತು ಆ ವಾದ್ಯದಲ್ಲಿ ಅಡಕವಾಗಿದೆ. ವೀಣೆಯಲ್ಲಿ ಎಷ್ಟು ಸಂಗೀತವನ್ನು ತೆಗೆಯಬಹುದು ಅಷ್ಟನ್ನೂ ಕೇಶವಮೂರ್ತಿಗಳು ತೆಗೆಯುತ್ತಾರೆಂದು ಹೇಳಬಹುದು. ಗಮಕವಾಗಲಿ, ತಾನವಾಗಲಿ, ನೆರವಲಾಗಲಿ, ರಾಗದ ಎಳೆತ ಜೀರುಗಳಾಗಲೀ ನಿಷ್ಕೃಷ್ಟವಾಗಿ ತುಂಬಿ ಬರುತ್ತವೆ. ನಾಲ್ಕಾರು ವಾದ್ಯಗಳ ಮೇಳದಲ್ಲಿ ದೊರೆಯುವ ಸಮರಸ ಕೇಶವಮೂರ್ತಿಗಳೊಬ್ಬರ ವಾದ್ಯವಾದನದಲ್ಲಿ ದೊರೆಯುತ್ತದೆ. ಇವರ ಸಾಧನೆಯನ್ನಂತೂ 'ರಣಸಾಧನೆ'ಯೆಂದೇ ಕರೆಯಬೇಕು. ಈ ಸಾಧನೆಗೆ ಸರಿಗಟ್ಟುವರೆಂದರೆ ಮೈಸೂರಿನ ಚೌಡಯ್ಯನವರೊಬ್ಬರೇ. ವೀಣೆಯಂತಹ ಕಷ್ಟಸಾಧ್ಯ ವಾದ್ಯ ಕೇಶವಮೂರ್ತಿಗಳ ಕೈಯಲ್ಲಿ ಲೀಲಾಜಾಲವಾಗಿ ಬಿಡುತ್ತದೆ. ಆದರೆ ಯಾವ ಕಾಲ, ತಾಳ ಪ್ರಮಾಣದಲ್ಲಿ ನುಡಿಸಿದರೂ ಒಂದು ಅಪಸ್ವರವಾಗಲಿ ಅಪಶ್ರುತಿಯಾಗಿ ಹೊರಡುವುದಿಲ್ಲ, ಮಧ್ಯಮಕಾಲದ ಕೀರ್ತನೆಗಳು, ಎಳೆತದ ಕೆಲಸವೆಂದರೆ ಕೇಶವಮೂರ್ತಿಗಳಿಗೆ ಮೆಚ್ಚು. ತಾಳದ 'ಸರ್ಕಸ್ಸಿ'ಗಿಂತಲೂ ರಾಗ-ಭಾವ-ರಸೋದ್ರೇಕಗಳ ಕಡೆಗೆ ಲಕ್ಷ್ಯ ಹೆಚ್ಚು. ಜೀವನದ ಅನಂತ ಜಂಜಡದಲ್ಲಿ ಚಿರಸುಂದರವಾದ ಶಾಂತಿಯನ್ನರಸುವ ಮಾನವನ ಇಷ್ಟಾರ್ಥ ಇವರ ವೀಣಾಗಾನ ಶ್ರವಣದಿಂದ ಪೂರೈಸುತ್ತದೆಂದು ನನ್ನ ಅನುಭವದಿಂದ ಹೇಳಬಲ್ಲೆ. ಕವಿಗುರುರು ರವೀಂದ್ರರು ಕಾಹಿಲೆಯಾಗಿದ್ದಾಗ ಒಮ್ಮೆ ಇವರ ವೀಣಾ ಗಾನವನ್ನು ಕೇಳಿ 'ಈಗ ನನಗೆ ಹೊಸ ಜನ್ಮ ಬಂತು' ಎಂದರಂತೆ. ಸತ್ಯವಾದ ಮಾತು.

ಕೇಶವಮೂರ್ತಿಗಳ ಕಲಾ ಸಂಪತ್ತು, ವಿದ್ವತ್ತುಗಳೆಷ್ಟು ದೊಡ್ಡವೋ ವೈಯಕ್ತಿಕ ಗುಣವೂ ಅಷ್ಟೇ ದೊಡ್ಡದು. ಸರಳವಾದ, ಮೈತ್ರಿಯನ್ನು ಬೆಳಸಿ ಉಳಿಸಿಕೊಳ್ಳುವ ಮನೋಭಾವ. ಅಹಂಕಾರವಿಲ್ಲ, ಆತ್ಮಸ್ತುತಿಯಿಲ್ಲ, ಸಂಗೀತಗಾರರಿಗೆ ರಕ್ತಗತವಾಗಿ ಬರುವ ಪರನಿಂದೆಯಂತೂ ಇಲ್ಲವೇ ಇಲ್ಲ, ಈ ಸದ್ಗುಣಗಳಿಂದ ತಮ್ಮ ವಿದ್ಯೆಗೂ, ತಾವಿರುವ ಹಿರಿಯ ಸ್ಥಾನಕ್ಕೂ ಕೇಶವಮೂರ್ತಿಗಳು ಕಲಶಪ್ರಾಯ

ರಾಗಿದ್ದಾರೆ. ಎಂಟು ಹತ್ತು ಜನ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತಿದ್ದಾರೆ. ಅವರಲ್ಲಿ ಕೆಲವರ ಎಲ್ಲ ಜವಾಬ್ದಾರಿಯನ್ನೂ ತಾವೇ ಔದಾರ್ಯದಿಂದ ಹೊತ್ತಿದ್ದಾರೆ. ಶಿಷ್ಯರಲ್ಲಿ ಒಬ್ಬರಾದರೂ ಗುರುಗಳಂತೆ ದೊಡ್ಡ ವಿದ್ವಾಂಸರೂ, ಮನುಷ್ಯರೂ ಆದರೆ ನಮ್ಮ ನಾಡು ಧನ್ಯ ವಾಗುತ್ತದೆ.

ಕೇಶವಮೂರ್ತಿಗಳು ಕನ್ನಡ ನಾಡನ್ನೆಲ್ಲಾ ಒಮ್ಮೆಯಾದರೂ ಸಂಚರಿಸಿ ಎಲ್ಲ ಕನ್ನಡ ರಸಿಕರಿಗೂ ತಮ್ಮ ಅಮರ ಗಾನದ ಸವಿಯ ನ್ನುಣಿಸಿ ತಣಿಸಬೇಕೆಂದು ನನ್ನ ಸೂಚನೆ.

———

## ೭. ಕುಂದಗೋಳದ ರಾಮರಾಯರು

### (ಸವಾಯ್ ಗಂಧರ್ವ)

ಮಹಾರಾಷ್ಟ್ರದ ಸಾಂಸ್ಕೃತಿಕ ಕೇಂದ್ರವಾದ ಪುಣೆ ನಗರದಲ್ಲಿ ಒಮ್ಮೆ ಒಂದು ನಾಟಕ ಪ್ರದರ್ಶನವಾಯಿತು. ನಾಟಕದಲ್ಲಿ ಒಬ್ಬ ನಟ ಪ್ರವೇಶಿಸಿ ಅಮೋಘವಾಗಿ ಹಾಡತೊಡಗಿದ. ಪ್ರೇಕ್ಷಕರಲ್ಲಿ ಗದ್ದಲ—ಯಾರೋ 'ಕಾನಡಿ ಅಪ್ಪಾ'* ಎಂದು ಕೂಗಿದರು; ಪ್ರೇಕ್ಷಕ ಸಮೂಹವೆಲ್ಲಾ ಆ ಕೂಗಿನೊಂದಿಗೆ ಬೆರೆಯಿತು. ಒಮ್ಮೆಲೇ ವಾದ್ಯವಾದನ ನಿಂತುಹೋಯಿತು. ನಟ ರಂಗದ ಮುಂದೆ ಬಂದು "ನಾನು ಕನ್ನಡ ದೇಶದನೆಂದು ಈ ಅಸಹನೆಯನ್ನು ತೋರುತ್ತಿದ್ದೀರಿ. ನನ್ನ ಸರಿಸಮನಾಗಿ ಹಾಡಬಲ್ಲವನು ನಿಮ್ಮಲ್ಲಿ ಯಾರಿದ್ದಾರೆ ಹೇಳಿ ನಾನು ಪಣ ತೊಡುತ್ತೇನೆ" ಎಂದು ಗಂಭೀರವಾಗಿ ಹೇಳಿ ಅಲ್ಲೇ ಬೈಟಕ್ಕಿಗೆ ಕುಳಿತ. ಮೂರು ನಾಲ್ಕು ಗಂಟೆಕಾಲ ಅಮೋಘವಾದ ಹಾಡುಗಾರಿಕೆ ಸಾಗಿತು. ಪ್ರೇಕ್ಷಕರು ಸ್ತಬ್ಧರಾದರು. ಬೈಟಕ್ ಮುಗಿಯುವ ಹೊತ್ತಿಗೆ ಹಾರಗಳ ಮೇಲೆ ಹಾರಗಳು ಗಾಯಕನ ಕೊರಳನ್ನಲಂಕರಿಸಿದವು. ಪ್ರೇಕ್ಷಕರು ಅವನ ವಿದ್ಯಾವೈಭವವನ್ನು ಮನದಣಿಯ ಹೊಗಳತೊಡಗಿದರು. ತನ್ನ ವಿದ್ವತ್ಪ್ರಭೆಯಿಂದ ಮಹಾರಾಷ್ಟ್ರರ ಅಸಹನೆ

---

* ಕನ್ನಡಿಗರಿಗೆ ತಿರಸ್ಕಾರಪೂರ್ವಕವಾಗಿ ಮಹಾರಾಷ್ಟ್ರದಲ್ಲಿ ಉಪಯೋಗಿಸಲ್ಪಡುವ ಸಂಬೋಧನೆ.

ಯನ್ನು ಜಯಿಸಿದ ಅಂದಿನ ನಟನೇ ಸವಾಯ್ ಗಂಧರ್ವ. ಈ ಬಿರುದು ರಾಮರಾಯರಿಗೆ ಬಂದುದು ಅಲ್ಲೇ.

ರಾಮರಾಯರು ಜಮಖಂಡಿ ಸಂಸ್ಥಾನಕ್ಕೆ ಸೇರಿದ ಕುಂದಗೋಳ ದವರು. ಹುಟ್ಟಿದ (೧೮೮೫) ೧॥ ವರ್ಷಕ್ಕೆ ತಾಯಿಯನ್ನು ಕಳೆದು ಕೊಂಡರು. ತಂದೆ ಗಣೇಶಪಂತರು ನಿಷ್ಣಾತರಾದ ತಬಲವಾದ್ಯವಾದನ ಗಾರರಾಗಿದ್ದರು. ೧೫ನೆಯ ವಯಸ್ಸಿನ ತನಕ ಶಾಲಾಶಿಕ್ಷಣ ಸಾಗಿತು. ಅದರಲ್ಲಿ ಹೆಚ್ಚು ಅಭಿರುಚಿಯಿಲ್ಲದೆ ಕುಂದಗೋಳದಲ್ಲಿ ಸಂಗೀತ ಹೇಳಿ ಕೊಡುತ್ತಿದ್ದ ಬಲವಂತರಾವ್ ಕೊಲ್ಹಟ್ಕರ್ ಎಂಬವರಲ್ಲಿ ಸಂಗೀತ ಅಭ್ಯಾ ಸಕ್ಕೆ ನಿಂತರು. ಅವರಲ್ಲಿ ದ್ರುಪದ, ಧುಮಾಲಿ ಪಾಠವಾಯಿತು. ೧೮೯೮ರಲ್ಲಿ ಬಲವಂತರಾಯರು ತೀರಿಕೊಳ್ಳಲು ಹುಬ್ಬಳ್ಳಿಗೆ ಬಂದು ಅಲ್ಲಿ ನಾಲ್ಕನೆಯ ಫಾರಂಗೆ ಸೇರಿದರು. ಹುಬ್ಬಳ್ಳಿಯ ಸ್ಪೋರ್ಟ್ಸ ಕ್ಲಬ್ಬಿನಲ್ಲಿ ಒಂದು ದಿನ ಖಾನ್ ಸಾಹೇಬ್ ಅಬ್ದುಲ್ ಕರೀಂಖಾನರ† ಗಾನವನ್ನು ಕೇಳಿದ ರಾಮರಾಯರು ಅವರ ಶಿಷ್ಯತ್ವವನ್ನು ವಹಿಸುವುದೆಂದು ನಿರ್ಧರಿಸಿ ದರು. ಕುಂದಗೋಳದ ಜಾಗಿರದಾರ್ ನಾಡಗೀರವರ ಆಮಂತ್ರಣದ ಮೇರೆ ಖಾನಸಾಹೇಬರು ಬೈಟಕ್ ಸಲುವಾಗಿ ಕುಂದಗೋಳಕ್ಕೆ ಬಂದರು. ಅಲ್ಲಿ ರಾಮರಾಯರು ಹಾಡಿ ತೋರಿಸಲು, ಖಾನ ಸಾಹೇಬರು ಅವರ ಶಾರೀರ ಸಂಪತ್ತಿಯನ್ನು ಮೆಚ್ಚಿ ಗಾನ ಕಲಿಸಲು ಒಪ್ಪಿಕೊಂಡರು. ಹುಬ್ಬಳ್ಳಿಯಲ್ಲಿ ಆರಂಭೋತ್ಸವವೂ ಆಗಿ ಹೋಯಿತು. ರಾಮರಾಯರು ಗುರುಗಳೊಂದಿಗೆ ಹೊರಟು ಬಿಟ್ಟರು. ಏಳುವರ್ಷ ಕಾಲ ಒಂದೇ ಸಮನೆ ಪಾಠಪ್ರವಚನಗಳಾದವು. ರಾಮರಾಯರೇ ಖಾನಸಾಹೇಬರ ಮೊದಲ ನೆಯ ಶಿಷ್ಯರಾದ್ದರಿಂದ ಅವರಿಗೂ ಸಾಕಷ್ಟು ಉತ್ಸಾಹವಿತ್ತು. ಖಾನ ಸಾಹೇಬರ ಗಾನಕ್ಕೆ ಹಿಂದೆ ಕುಳಿತು ತಂಬೂರಿ ಮಿಾಟುವುದೂ, ಜತೆಯಲ್ಲಿ ಹಾಡುವುದೂ ರಾಮರಾಯರ ಕೆಲಸವಾಗಿತ್ತು.

೧೯೦೭ರಲ್ಲಿ ಗಾನದ ಸಲುವಾಗಿ ಖಾನಸಾಹೇಬರು ಶಿಷ್ಯನೊಂದಿಗೆ ಸೊಲ್ಲಾಪುರಕ್ಕೆ ಬಂದರು. ಅಲ್ಲಿ ತಮ್ಮ ನಾಟಕದ ಕಂಪೆನಿ ತೆಗೆದುಕೊಂಡು

---

† ಖಾನ್‌ಸಾಹೇಬ್ ಅಬ್ದುಲ್ ಕರೀಂಖಾನರವರೂ ಅಚ್ಚಕನ್ನಡಿಗರು. ಅವರ ಸ್ಥಳ ಮಿಾರಜ್.

ಬಂದಿದ್ದ ಪಟ್ಟವರ್ಧನ್ ಎಂಬುವರು ರಾಮುರಾಯರನ್ನು ಕಂಪೆನಿಗೆ ಸೇರಿಸಿ ಕೊಳ್ಳಲು ಹವಣಿಸಿದರು. ಸ್ವಪ್ರಯತ್ನ ಸಫಲವಾಗದಿರಲು ಜಮಖಂಡಿ ರಾಜಾಸಾಹೇಬರಿಂದ ಖಾನಸಾಹೇಬರಿಗೆ ಕಾಗದ ತಂದು ಅವರನ್ನು ತಮ್ಮ ಕಂಪೆನಿಗೆ ಒಯ್ದರು. ಅಮರಾವತಿಯಲ್ಲಿ ತಿಂಗಳಿಗೆ ರೂ. ೧೨೫ ಸಂಬಳದ ಮೇಲೆ ರಾಮುರಾಯರು ಕಂಪೆನಿಯಲ್ಲಿ ಪಾತ್ರಗಳನ್ನು ವಹಿಸಲಾರಂಭಿಸಿದರು. ಇವರ ಮೊದಲನೆಯ ಭೂಮಿಕೆಯೆಂದರೆ ಸೌಭದ್ರ ನಾಟಕದಲ್ಲಿ ಸೌಭದ್ರ ಪಾತ್ರ. ಅದನ್ನು ನೋಡಿದ ಅಸ್ನಾರಿಯವರೂ, ದಾದಾಸಾಹೇಬ್ ಖಾಪರ್ಡೆಯವರೂ ಬಹಳವಾಗಿ ಶ್ಲಾಘಿಸಿ ತರುಣ ನಟನನ್ನು ಹರಸಿದರು. ಮಹಾರಾಷ್ಟ್ರ ರಂಗಭೂಮಿಯ ಮೇಲೆ ಸಶಾಸ್ತ್ರೀಯ ಗಾನಕ್ಕೆ ರಾಮುರಾಯರೇ ಮೂಲಕಾರಣ, ಅವರೇ ಅದರ ಆದ್ಯ ಪ್ರವರ್ತಕರು.

ಮಂಡಳಿಯವರು ೧೯೧೦ರಲ್ಲಿ ಸುಪ್ರಸಿದ್ಧ ಹರಿನಾರಾಯಣ ಆಪ್ಟೆಯವರ “ಸಂತ ಸಖೂಬಾಯಿ” ನಾಟಕವನ್ನು ತೆಗೆದುಕೊಂಡರು. ಅದರಲ್ಲಿ ರಾಮುರಾಯರು ಸಖೂಪಾತ್ರವನ್ನೂ ಮಾಸ್ತರ್ ಕೃಷ್ಣರಾಯರು ವಿಠಲನ ಪಾತ್ರವನ್ನೂ ಅಭಿನಯಿಸುತ್ತಿದ್ದರು. ರಾಮುರಾಯರ ಗಾನಕ್ಕೆ ಮನಸೋತ ಮಾಸ್ತರ್ ಕೃಷ್ಣಾ ಅವರ ಶಿಷ್ಯತ್ವವನ್ನು ಸ್ವೀಕರಿಸಿ ಮೂರು ವರ್ಷ ಕಾಲ (೧೯೧೦-೧೩) ಅವರಿಂದ ಗಾನವನ್ನು ಕಲಿತರು.

ಮೂರನೆಯ ವರ್ಷ ಕಂಪೆನಿಯನ್ನು ಬಿಟ್ಟು ‘ನೂತನ ಸಂಗೀತ ನಾಟಕ ಮಂಡಳಿ’ ಎಂಬ ಹೆಸರಿನಿಂದ ತಾವೇ ಒಂದು ಸಂಘವನ್ನು ಸ್ಥಾಪಿಸಿದರು. ಅನೇಕ ಹೊಸ ನಾಟಕಗಳನ್ನು ಬರೆಯಿಸಿ ಅದರಲ್ಲಿ ತೆಗೆದುಕೊಂಡಿದ್ದರು. ಅವರು ಅಭಿನಯಿಸುತ್ತಿದ್ದ ‘ಆತ್ಮತೇಜ’ ಎಂಬ ನಾಟಕವನ್ನು ದಿವಂಗತ ಲೋಕಮಾನ್ಯ ತಿಲಕರವರು ನೋಡಿ ತುಂಬ ಮೆಚ್ಚಿದರು. ೧೯೨೫ರ ತನಕ ಕಂಪೆನಿ ಯಶಸ್ವಿಯಾಗಿ ನಡೆದು ಬಂತು. ಆ ವರ್ಷ ಪ್ರಧಾನ ಪಾತ್ರ ಧರಿಸುತ್ತಿದ್ದ ಕೆಲವು ನಟರು ತೀರಿಕೊಳ್ಳಲು ರಾಮುರಾಯರು ದುಃಖದಿಂದ ಕಂಪೆನಿಯನ್ನು ನಿಲ್ಲಿಸಿಬಿಟ್ಟರು.

ಮಹಾರಾಷ್ಟ್ರಕೋಕಿಲ ಶಂಕರರಾವ್ ಸರ್‌ನಾಯಕರವರು ಆಗ ‘ಯಶವಂತ ನಾಟಕ ಮಂಡಳಿ’ಯನ್ನು ನಡೆಸುತ್ತಿದ್ದರು. ಸರ್ವಸಾಹಸ ಮಾಡಿ ರಾಮುರಾಯರನ್ನು ತಮ್ಮ ಕಂಪೆನಿಗೆ ತೆಗೆದುಕೊಂಡರು. ಇದರಿಂದ

ಶಂಕರರಾಯರಿಗೆ ಶುಕ್ರದೆಸೆ ಬಂದ ಹಾಗಾಯಿತು. ಅವರ ಮಾನಾಪಮಾನ, ತುಲಸೀದಾಸ ನಾಟಕಗಳಿಗೆ ಹೊನ್ನಿನ ಮಳೆ ಸುರಿಯಲಾರಂಭವಾಯಿತು.

ತಮ್ಮ ಗುರುಗಳ ಶಿಷ್ಯವರ್ಗಕ್ಕೆ ಸೇರಿದ ಶ್ರೀಮತಿ ಹೀರಾಬಾಯಿ ಬರೋಡ್‌ಕರ್ ಅವರು ೧೯೨೯ರಲ್ಲಿ 'ನೂತನ ಸಂಗೀತ ವಿದ್ಯಾಲಯ'ದ ನಾಟ್ಯಶಾಖೆಯನ್ನು ತೆಗೆಯಲು ರಾಮರಾಯರು ಅವರ ಸಹ ನಟರಾಗಿ ನಿಂತರು. ಮೀರಾಬಾಯಿ, ಸೌಭದ್ರ ನಾಟಕಗಳು ಇಬ್ಬರ ಗಾನವೈಖರಿಯಿಂದ ವಿಶೇಷ ಶೋಭಿಸತೊಡಗಿದವು. ಈ ಮಂಡಳಿಯ ಉತ್ಕರ್ಷದೆಶೆಯೆಂದರೆ, ಮಹಾರಾಷ್ಟ್ರ ಸಂಗೀತದ ಉತ್ಕರ್ಷದೆಶೆಯೆಂದು ಹೇಳಬಹುದು. ೧೯೩೨ರಲ್ಲಿ ಹೀರಾಬಾಯಿಯವರ ಕಂಪನಿಯನ್ನು ಕೆಲವು ಕಾರಣಗಳಿಂದ ಬಿಡಬೇಕಾಯಿತು. ಸರ್‌ನಾಯಕರ ಒತ್ತಾಯಕ್ಕೆ ಅವರಲ್ಲಿ ಮತ್ತೆ ಹೋಗಿ ನಾಲ್ಕು ತಿಂಗಳಿದ್ದು ರಂಗಭೂಮಿಯ ಜೀವನಕ್ಕೆ ಸಾಷ್ಟಾಂಗ ನಮಸ್ಕಾರ ಹಾಕಿಬಿಟ್ಟರು.

ರಾಮರಾಯರ ನಾಟಕ-ಜೀವನದಲ್ಲಿ ಕೆಲವು ವಿನೋದ ಪ್ರಸಂಗಗಳಾಗುತಿದ್ದುವು. ಇವರ ಗುರುಗಳಿಗೆ ನಾಟಕವೆಂದರೆ ಸೇರುತ್ತಿರಲಿಲ್ಲ. ತಮ್ಮ ಶಿಷ್ಯ ನಾಟಕ ಸೇರುವುದಂತೂ ಸುತರಾಂ ಬೇಕಿರಲಿಲ್ಲ. ಒಂದು ಸಲ ಖಾನಸಾಹೇಬರು ಶಿಷ್ಯನ ಪಾತ್ರವನ್ನು ನೋಡಬೇಕೆಂದು ಆಗಂತುಕರ ಹಾಗೆ ಬಂದು ಮಂದಿರದಲ್ಲಿ ಕುಳಿತಿದ್ದಾರೆ. ಜತೆಯಲ್ಲಿ ಒಂದು ಉಡುಗರೆಯನ್ನೂ ತಂದಿದ್ದರು. ಶಿಷ್ಯನ ಸ್ತ್ರೀ ಭೂಮಿಕೆಯನ್ನು ಸ್ವಲ್ಪ ಹೊತ್ತು ನೋಡಿ ತಾವು ತಂದಿದ್ದ ಸೀರೆಯನ್ನು ಶಿಷ್ಯನಿಗೆ ಕಳುಹಿಸಿಕೊಟ್ಟು ತಾವು ಹೊರಟು ಬಿಟ್ಟರು. ಉಡುಗರೆಯ ಹಿಂದಿದ್ದ ಚುಚ್ಚು ರಾಮರಾಯರಿಗೆ ಅರ್ಥವಾಗದಿರಲಿಲ್ಲ. ಆದರೂ ಗುರುಗಳು ತಮ್ಮ ಭೂಮಿಕೆಯನ್ನು ಒಮ್ಮೆಯಾದರೂ ನೋಡಿದರಲ್ಲಾ ಎನ್ನುವುದೇ ತೃಪ್ತಿ. ಗುರು ಶಿಷ್ಯರ ಪ್ರೇಮ ಆದರ್ಶವಾಗಿತ್ತು. 'ರಾಮು' ಎಂದರೆ ಸಾಕು ಖಾನಸಾಹೇಬರ ಮೈಯೆಲ್ಲಾ ಕಿವಿಯಾಗುತ್ತಿತ್ತು. ನಾನೊಂದು ಸಲ ಅಬ್ದುಲ್ ಕರೀಮರೊಂದಿಗೆ ಪ್ರಸ್ತಾಪಿಸುತ್ತ 'ನಿಮ್ಮ ಶಿಷ್ಯನ ಹಾಡಿಕೆಯ ವಿಚಾರ ನಿಮ್ಮ ಅಭಿಪ್ರಾಯವೇನು' ಎಂದು ಕೇಳಿದೆ. ಅದಕ್ಕವರು 'ಅವನ ಹಾಗೆ ಹಾಡುವುದಕ್ಕೆ

ನನಗೂ ಸಾಧ್ಯವಿಲ್ಲ' ಎಂದು ನಿರ್ವಂಚನೆಯಿಂದ ಉತ್ತರವಿತ್ತಿದ್ದರು. ರಾಮರಾಯರು ಕಂಪೆನಿ ಬಿಟ್ಟೊಡನೆಯೇ ಪ್ರವಾಸವನ್ನು ಆರಂಭಿಸಿದರು. ಮೈಸೂರು, ಬರೋಡಾ, ಮುಂಬಯಿ, ಹೈದರಾಬಾದು ಮೊದಲಾದ ದೊಡ್ಡ ಪಟ್ಟಣಗಳಲ್ಲಿ ರಸಿಕರ ಮತ್ತು ರಾಜರ ಮುಂದೆ ಕಛೇರಿಗಳನ್ನು ಮಾಡಿದರು. ಒಂದು ಸಲ ಮುಂಬಯಿಯ ಗಣೇಶೋತ್ಸವ ಕಾಲಕ್ಕೆ ಇವರದೇ ಏಳು ಬೈಟಕಗಳಾದವು. ೧೯೩೨ರ ಆಗಸ್ಟ್ ತಿಂಗಳಲ್ಲಿ ನಾಗಪುರದ ಮಹಾಜನರು ಸಾರ್ವಜನಿಕ ಸಭೆ ಮಾಡಿ ಇವರನ್ನು ಗೌರವಿಸಿದರು. ಸಂಗೀತವಿದ್ಯಾ ವಿಶಾರದರಾದ ಧರ್ಮಪುರದ ಮಹಾರಾಜರೂ, ನರಸಿಂಹ ಚಿಂತಾಮಣಿ ಕೇಳ್ಕರ್, ರಾಜಾಸಾಹೇಬ್ ರಾನಡೇ, ಸರ್ ಮುಜಂದಾರ್ ಮೊದಲಾದ ಪ್ರಭೃತಿಗಳು ರಾಮರಾಯರ ಗಾನದ ಅಚ್ಚಭಕ್ತರಾಗಿದ್ದಾರೆ. ೧೯೩೮ರಲ್ಲಿ ಕೂಡಲಿ ಮಠದ ಸ್ವಾಮಿಗಳವರು ರಾಮರಾಯರಿಗೆ "ಗಾನ ಕೇಸರಿ" ಎಂಬ ಬಿರುದನ್ನು ದಯೆಪಾಲಿಸಿದರು.

ರಾಮರಾಯರ ಗಾಯನ ಕೌಶಲ್ಯಕ್ಕೆ ಅವರ ಅಪೂರ್ವವಾದ ಸ್ವರ ಲಕ್ಷಣವೇ ಕಾರಣ. ಗಂಭೀರವೂ, ಸುಶ್ರಾವ್ಯವೂ ಆದ ಶಾರೀರ, ನಯ, ಘಾತಗಳೆರಡರ ಅಪೂರ್ವ ಮೇಳವಿದೆ. ವಾದಿ ಸಂವಾದಿಗಳ ಲಲಿತಲಾಸ್ಯದಲ್ಲಿ ಇವರ ಗಾನ ಬೆಳೆಯುತ್ತದೆ. ರಾಮರಾಯರು ಖಾನಸಾಹೇಬರಂತೆ ರಾಗಪ್ರೇಮಿಗಳು. ತಾಳದ ಸರ್ಕಸ್ಸಿಗಿಂತಲೂ ರಾಗದ ಅಂದೋಲನದ ಕಡೆಗೆ ಲಕ್ಷ್ಯ, ವಿಶ್ವಾಸ ಬಹಳ. ಕರುಣ, ವೀರ, ಶೃಂಗಾರ ರಸಗಳೇ ಇವರ ಗಾಯನವನ್ನು ಆಳುವ ತ್ರಿಮೂರ್ತಿಗಳು. ಸಂಗೀತದಲ್ಲಿ ಸುಖದ ಕಡೆಗೆ ಎಷ್ಟು ಲಕ್ಷ್ಯವೋ ಶಾಸ್ತ್ರಪರಿಶುದ್ಧತೆಯ ಕಡೆಗೂ ಅಷ್ಟೇ ಲಕ್ಷ್ಯ. ಇವರು ವಿಲಂಬಕಾಲದಲ್ಲಿ ಹಾಡುವಾಗ, ತಾಳ ಹಾಕುವುದು ದೊಡ್ಡ ದೊಡ್ಡ ವಿದ್ವಾಂಸರಿಗೂ ಕಷ್ಟವಾಗುತ್ತದೆ.—ಪೂರ್ಯಾ, ಭೀಮಪಲಾಸ, ದುರ್ಗಾ, ಜೋಗಿ, ಪಹಡಿ, ಯಮನ್, ಬಿಲಾವಲ್ ಇವೇ ರಾಮರಾಯರ ಕೆಲವು 'ಖಾಸಾ' ರಾಗಗಳು. ಭೀಮಪಲಾಸಿನಂತಹ ಸಾಧಾರಣ ರಾಗವನ್ನೂ ತಮ್ಮ ವ್ಯಕ್ತಿತ್ವದ ಅಚ್ಚೊತ್ತಿ ಹಾಡುತ್ತಾರೆ; ಅದನ್ನು ಅಪರೂಪರಾಗದ ಸ್ಥಾನಕ್ಕೇರಿಸುತ್ತಾರೆ. ಮಹಾರಾಷ್ಟ್ರ ಸಂಗೀತ ನಾಟಕಗಳ ಉತ್ಕರ್ಷಕ್ಕೆ ರಾಮರಾಯರ ಸೇವೆ ಮಹತ್ತರವಾದುದು. ರಂಗಕ್ಕೆ ಸಾರಂಗಿ

ವಾದ್ಯವನ್ನು ಪರಿಚಯಮಾಡಿಕೊಟ್ಟವರೇ ಇವರು. ಇವರ ಸುಧಾರಣೆಗಳನ್ನು ಬಾಲಗಂಧರ್ವ ಮೊದಲಾದವರು ಅನುಕರಿಸಲಾರಂಭಿಸಿದರು.

ಜೀವಮಾನವೆಲ್ಲಾ ಮಹಾರಾಷ್ಟ್ರ ದೇಶದಲ್ಲಿ ಅವರ ಕಲೆಗಳ ಸೇವೆ ಮಾಡಿ ಕಳೆದೆನಲ್ಲಾ ಎಂದು ಬಹಳ ಪರಿತಪಿಸುತ್ತಾರೆ. ಕನ್ನಡದೇಶ, ಕಲೆಗಳು, ಕನ್ನಡಿಗರ ಆತ್ಮಗೌರವವೆಂದರೆ ರಾಮರಾಯರಿಗೆ ಬಹಳ ಮೆಚ್ಚು. ಕನ್ನಡದ ಸಲುವಾಗಿ ಪುಣೆ ಮೊದಲಾದ ಸ್ಥಳಗಳಲ್ಲಿ ಮಹಾರಾಷ್ಟ್ರರೊಂದಿಗೆ ಬಡಿದಾಡುವುದಕ್ಕೆ ರಾಮರಾಯರು ಹೆಸರಾಗಿದ್ದಾರೆ.

ಈಗಿವರು ತಮ್ಮ ಊರಿನಲ್ಲಿಯೇ ಇರುತ್ತಾರೆ. ಪ್ರತಿ ಗುರುವಾರ ತಮ್ಮ ಮನೆಯಲ್ಲಿ ಹಾಡುತ್ತಾರೆ. ಅದನ್ನು ಕೇಳುವುದಕ್ಕೆ ಧಾರವಾಡ, ಹುಬ್ಬಳ್ಳಿ, ಹಾವೇರಿಗಳಿಂದ ಜನರು ತಂಡತಂಡವಾಗಿ ಸೇರುತ್ತಾರೆ. ಹುಬ್ಬಳ್ಳಿಯ ಗಂಗೂಬಾಯಿ (ಹಾನಗಲ್ ಗಾಂಧಾರಿ) ಇವರ ಶಿಷ್ಯೆಯಾಗಿ ಗುರುವಿಗೆ ಕೀರ್ತಿತರುವ ಶುಭಸೂಚನೆಯನ್ನು ತೋರುತ್ತಿದ್ದಾಳೆ.

ಮುಂಬಯಿ ರೇಡಿಯೋನಲ್ಲಿ ರಾಮರಾಯರ ಗಾನ ತಿಂಗಳಿಗೆ ಎರಡು ಮೂರು ಬಾರಿಯಾದರೂ ಕೇಳಿ ಬರುತ್ತದೆ.

ಅಖಿಲ ಭಾರತದಲ್ಲಿ ಕನ್ನಡಿಗರ ಕಲಾಮಹಿಮೆಯನ್ನು ಸಾರಿ, ಕನ್ನಡಿಗತನವನ್ನು ಎತ್ತಿ ಹಿಡಿದವರಲ್ಲಿ ರಾಮರಾಯರೊಬ್ಬರೆಂದು ನಿಸ್ಸಂಕೋಚವಾಗಿ ಹೇಳಬೇಕಾಗುತ್ತದೆ.

೫-೫-೧೯೩೯

## ತರುವಾಯ

ಶ್ರೀರಾಮರಾಯರು ಉಲ್ಬಣ ಜೇನೆಗೆ ತುತ್ತಾಗಿ ಕುಂದಗೋಳದಲ್ಲಿದ್ದ ಸುದ್ದಿ ಬಂದು ಗಾಯನಾರಾಧಕರನ್ನು ತುಂಬ ದುಃಖಪಡಿಸಿತು. ಈಗವರು ಗುಣಹೊಂದಿ ಮತ್ತೆ ಬೈಟಕ್ಕುಗಳನ್ನು ಮಾಡುತ್ತಿರುವ ಸಂಗತಿ ನಮಗೆ ಅತ್ಯಂತ ಸಂತೋಷವನ್ನುಂಟುಮಾಡಿದೆ.

೩೦-೩-೧೯೪೬





ಎ. ವಿ. ವಿ.
ತರುಣರಾಗಿದ್ದಾಗ



ಎ. ವಿ. ವಿ.
ಪ್ರಬುದ್ಧರಾಗಿದ್ದಾಗ

[ಪುಟ ೪೬



ರೋಮಿಯೋ.　　ಪ್ರೊ. ಎ. ವಿ. ವರದಾಚಾರ್ಯ



ದುಷ್ಯಂತ.　　ಎ. ವಿ. ವರದಾಚಾರ್ಯ

## ೮. ನಟಶಿರೋಮಣಿ ಎ. ವಿ. ವರದಾಚಾರ್ಯ

ಕರ್ನಾಟಕ ನಾಟಕರಂಗದ ಪ್ರಭುವಾಗಿ ಬೆಳಗಿದ ಶ್ರೀ| ವರದಾಚಾರ್ಯರ ಮೃತಿಯ ವಾರ್ತೆಯಿಂದ (೬—೪—೧೯೨೬) ಕನ್ನಡಿಗರಿಗೆ ಸಿಡಿಲುಬಡಿದಂತಾಯಿತು. ಜೀರ್ಣವಾಗಿದ್ದ ನಾಟಕ ಕಲೆಯನ್ನುದ್ಧರಿಸಲು ಭರತಾಚಾರ್ಯನಂತೆ ೫೩ ವರ್ಷಗಳು ಮೆರೆದು, ಕಲಾಭ್ಯುದಯಕ್ಕಾಗಿ ತನುಮನಧನಗಳನ್ನರ್ಪಿಸಿದ ಆಚಾರ್ಯರು ತನ್ನ ಅಂತಿಮ ಕಾಲವನ್ನು ದಾರಿದ್ರ್ಯದಶೆಯಲ್ಲಿಯೂ, ಉಪಟಳಗಳ ಬಾಧೆಯಿಂದಲೂ ಕಳೆದರು.

ಉತ್ತಮ ವಂಶದಲ್ಲಿಯೇ ವರದಾಚಾರ್ಯರು ಜನಿಸಿ ಎಫ್. ಎ. ವರೆಗೆ ಆಧುನಿಕ ರೀತ್ಯಾ ಶಿಕ್ಷಣ ಪಡೆದರು. ಈ ಅವಧಿಯಲ್ಲವರು ಮಾತಾಪಿತೃಗಳ ವಿಯೋಗ, ದಾರಿದ್ರ್ಯದುಃಖಾದಿಗಳನ್ನು ಕಂಡರು. ವಿದ್ಯಾಭ್ಯಾಸವನ್ನು ದ್ರವ್ಯಾಭಾವದಿಂದ ಮುಂದುವರಿಸಲಾರದೆ ಆಗತಾನೆ ಶ್ರೀ ಚಾಮರಾಜೇಂದ್ರ ಒಡೆಯರವರ ಆಶ್ರಯಲ್ಲಿ ಸ್ಥಾಪಿತವಾಗಿದ್ದ ಶ್ರೀ ಗೌರಿ ನರಸಿಂಹಯ್ಯನವರ ಸರಸ್ವತೀ ವಿಲಾಸ ನಾಟಕ ಸಭೆಯನ್ನು ಸೇರಿದರು. ಶ್ರೀ| ನರಸಿಂಹಯ್ಯನವರು ಆಚಾರ್ಯರ ಪ್ರತಿಭೆಯನ್ನು ಕಂಡುಕೊಂಡು, ಅದನ್ನು ಸದುಪಯೋಗಮಾಡಿಕೊಂಡು, ಮೊದಲಿನಿಂದಲೂ ಅವರಿಗೆ ಪ್ರಧಾನ ಪಾತ್ರಗಳನ್ನೇ ಕೊಡುತ್ತಿದ್ದರು. ಹುದುಗಿದ್ದ ಸತ್ವ ಹೊರಮೂಡಲನುಕೂಲವಾಯಿತು. ಸಭೆಯೊಂದಿಗೆ ೧೮೯೦ ರಲ್ಲಿ ಆಚಾರ್ಯರು ಬೆಂಗಳೂರು ಬಳ್ಳಾರಿ ಪ್ರಾಂತ್ಯಗಳಿಗೆ ಪ್ರವಾಸಹೋಗಿ ತಮ್ಮ ಕೀರ್ತಿ ಪಳವಿಗೆ ನೆಟ್ಟರು. ಪ್ರವಾಸವನ್ನು ಮುಗಿಸಿಕೊಂಡು ಬಂದನಂತರ ಕೆಲಕಾಲದೊಳ

ಗಾಗಿಯೇ ಸಭೆಯೊಡೆಯಿತು. ಆ ಕಾಲದಲ್ಲಿಯೇ ಆಚಾರ್ಯರಿಗೆ ವಿಪತ್ಪರಂಪರೆಗಳು ಬರಲಾರಂಭಿಸಿ ಅವರ ಧರ್ಮಪತ್ನಿ ಏಕಮಾತ್ರ ಪುತ್ರ ಚಿ|| ಕುಪ್ಪು ಕಾಲಾಧೀನರಾದರು. ನಟಶೇಖರನ ಹೃದಯ ಒಡೆಯಿತು. ದಾರಿದ್ರ್ಯದ ಕೋಟಲೆಯಿಂದ ವಿಮುಕ್ತರಾಗಲು ಬೆಂಗಳೂರು ರೆಸಿಡೆಂಟರ ಕಛೇರಿಯಲ್ಲೊಂದು ಗುಮಾಸ್ತೆಯ ಹುದ್ದೆಯನ್ನು ಸೇರಿದರು. ಆಚಾರ್ಯರ ಪರಿಸ್ಥಿತಿಗೆ ಪರಿತಾಪ ಪಟ್ಟು ಅವರ ಗೆಳೆಯರು ಕೆಲವರು "ಬೆಂಗಳೂರು ಯೂನಿಯನ್" ಎಂಬ ನಾಟಕ ಸಂಘವೊಂದನ್ನೇರ್ಪಡಿಸಿ ಆಚಾರ್ಯರನ್ನೇ ಸರ್ವಾಧಿಕಾರಿಗಳನ್ನಾಗಿ ಮಾಡಿದರು. ಇಂದಿಗೂ ಜೀವಂತರಾಗಿರುವ ಬೆಂಗಳೂರು ಯೂನಿಯನ್ನಿನ ವ್ಯವಸ್ಥಾಪಕರಿಂದ ಅವರಾಡುತ್ತಿದ್ದಂತೆ "ಗುಲೇಬಕಾವಲಿ" ನಾಟಕವನ್ನು ಈಗಲೂ ಯಾರೂ ಆಡಿ ತೋರಿಸುತ್ತಿಲ್ಲವೆಂದು ಕೇಳಿರುವೆನು. ಕಾರಣಾಂತರಗಳಿಂದ ಈ ಸಂಘ ಮುರಿಯಲು, ಆಚಾರ್ಯರೇ ೧೯೦೬ನೆಯ ಇಸವಿಯಲ್ಲಿ 'ರತ್ನಾವಳಿ ನಾಟಕ ಸಭೆ'ಯನ್ನು ಸ್ಥಾಪಿಸಿ, ಆಮರಣಪರ್ಯಂತ ನಡೆಸಿಕೊಂಡು ಬಂದರು.

ಆಚಾರ್ಯರ ಪ್ರತಿಭೆಯ ಪರಿಚಯವನ್ನು ಮಾಡಿಕೊಡಬೇಕಾದರೆ ಒಂದು ದೊಡ್ಡ ಗ್ರಂಥವನ್ನೇ ಬರೆಯಬೇಕಾಗುವುದು. ನಟನಿರಬೇಕಾದ ಸಮಸ್ತ ಗುಣಗಳೂ ಆಚಾರ್ಯರನ್ನು ಆಶ್ರಯಿಸಿದ್ದುವು. ಸುಂದರವಾದ ವದನಾರವಿಂದ, ಸ್ಫೂರ್ತಿಯುಳ್ಳ ಕಂಗಳು, ರಾಜಠೀವಿಯ ಬೆಡಗು, ನಡೆನುಡಿ, ಮಧುರವಾದ ಕಂಠ ಇವು ಎಲ್ಲವುಗಳ ಸಮಾಗಮವನ್ನು ನಾನು ಕಂಡುದು ಆಚಾರ್ಯರೊಬ್ಬರಲ್ಲೇ; ಅವರು ಸುಮಾರು ೩೦ ನಾಟಕಗಳನ್ನಾಡುತ್ತಿದ್ದರು. ಅವುಗಳಲ್ಲಿ ಒಂದು ಪಾತ್ರವನ್ನೂ ಕೆಡಿಸಿದುದು ಕಂಡು ಇಲ್ಲ, ಯಾರಿಂದಲೂ ಕೇಳಿಯೂ ಇಲ್ಲ, ಒಂದೇ ಪಾತ್ರಾಭಿನಯವನ್ನು ನೂರು ಬಾರಿ ನೋಡಿದರೂ ಮತ್ತೆ ಮತ್ತೆ ನೋಡಬೇಕೆಂದೆನಿಸುತ್ತಿತ್ತು. ಪ್ರಹ್ಲಾದ ಚರಿತ್ರೆಯ "ಹಿರಣ್ಯಕಶಿಪು", ನಿರುಪಮೆಯ "ಸಂತಾಪಕ" ಶಾಕುಂತಲದ 'ದುಷ್ಯಂತ' ರತ್ನಾವಳಿಯ "ವಸಂತ" ರಾಮವರ್ಮ ಲೀಲಾವತಿಯ 'ರಾಮವರ್ಮ' ಗಳನ್ನು ಸಂಸಾರದ ಸಾಮಾನುಗಳನ್ನು ಒತ್ತೆಯಿಟ್ಟು ನೋಡಿದವರನ್ನು ನಾನು ಬಲ್ಲೆ. ಹರಿಶ್ಚಂದ್ರ ಚರಿತ್ರೆಯಲ್ಲಿ

ಕಂಬನಿಯಿಂದ ವಸ್ತ್ರಗಳನ್ನು ನೆನೆಯಿಸದಿದ್ದವರಾರು ? ಪ್ರಹ್ಲಾದ ಚರಿತ್ರೆಯಲ್ಲಿ ರೋಮಾಂಚವನ್ನು ಪಡೆಯದಿದ್ದವರಾರು ? ದುಷ್ಯಂತನ, ಕೀಚಕನ, ಮದನ ವೇಷೆಯನ್ನು ನೋಡಿ ಮರುಕಗದಿದ್ದವರಾರು ? ಪಾತ್ರಾಭಿನಯವೆಂದರೆ ಆಚಾರ್ಯರಿಗೆ ಪಾತ್ರವನ್ನು ಸಾಕ್ಷಾತ್ಕಾರ ಮಾಡಿಕೊಂಡಂತೆಯೇ. ಹಿರಣ್ಯಕಶಿಪುವಾಗಿ, ಭೂದೇವಿ, ಪ್ರಹ್ಲಾದನನ್ನು ದಂಡಿಸಿದ ರಭಸದಲ್ಲಿ ಪೆಟ್ಟು ತಿಂದ ನಟರನ್ನು ನಾನು ಬಲ್ಲೆ. ಸಂತಾಪಕ ಪಾತ್ರವನ್ನಭಿಯಿಸುತ್ತಾ ಕೊನೆಯ ದೃಶ್ಯದಲ್ಲವನ ಆತ್ಮಹತ್ಯವನ್ನು ತೋರಿಸುತ್ತಾ ಕುತ್ತಿಗೆಗೆ ಹಗ್ಗವನ್ನು ಬೀರಿಕೊಂಡು ಆಚಾರ್ಯರು ಎಷ್ಟೋಸಲ ಸ್ಮೃತಿತಪ್ಪಿದ್ದರು. ದೇಹಾರೋಗ್ಯ ಕೆಟ್ಟಿರಲಿ, ಇತರ ಕಾರಣಗಳಿಂದ ಸ್ಮೃತಿವಶದಲ್ಲಿರದಿರಲಿ, ಆಚಾರ್ಯರು ರಂಗಕ್ಷೇತ್ರವನ್ನು ಪ್ರವೇಶಿಸಿ ಬಿಟ್ಟರೆಂದರೆ ಹೊಸ ಜನ್ಮವನ್ನೇ ಪಡೆಯುತ್ತಿದ್ದರು.

ಅವರ ಔದಾರ್ಯದ ವಿಚಾರ—ಕರ್ಣನು ಐತಿಹಾಸಿಕ ಪುರುಷನಾಗಿರಲಿಲ್ಲವೆಂದು ವಾದಮಾಡುವವರಿಗೆ ಆಚಾರ್ಯರ ಜೀವನವೇ ಪ್ರತ್ಯುತ್ತರವಾಗಿತ್ತು. ಬೇಡಿದವರಿಗೆ ಇಲ್ಲವೆಂದ ದಿನವೇ ಇಲ್ಲ. ತಮ್ಮಲ್ಲಿರಲಿ ಇಲ್ಲದಿರಲಿ, ಸಾಲವಾದರೂ ತಂದು ದಾನ ನೀಡುತ್ತಿದ್ದರು. ಈಗ ಆಂಧ್ರ ವಿಶ್ವವಿದ್ಯಾಪೀಠದ ಸ್ಥಾನಪತಿಗಳಾಗಿರುವ ಶ್ರೀ। ಸಿ. ಆರ್. ರೆಡ್ಡಿಯವರು ತಮ್ಮಲ್ಲಿಗೆ ಸಹಾಯ ಕೋರಿ ಬಂದ ವಿದ್ಯಾರ್ಥಿಯೊಬ್ಬನನ್ನು ರಾಜಕುಮಾರನಲ್ಲಿಗೆ ಕಳುಹಿಸುತ್ತೇನೆಂದು ಹೇಳಿ ವರದಾಚಾರ್ಯರಲ್ಲಿಗೆ ಕಳುಹಿಸಿದುದೇ ಇದಕ್ಕೆ ನಿದರ್ಶನ. ಮಂಡಳಿಯ ಲೆಕ್ಕದಂತೆ ಇವರ ದಾನಧರ್ಮ ೮೦,೦೦೦ ರೂಪಾಯಿಗಳಾಗಿತ್ತೆಂದು ತಿಳಿಯ ಬರುತ್ತದೆ. ನೈಜವಾಗಿ ಅದು ೮೦,೦೦೦ ರೂಪಾಯಿಗಳ ನಾಲ್ಕರಷ್ಟಾದರೂ ಆಗಿರಬೇಕೆಂದು ಆಚಾರ್ಯರನ್ನು ಚೆನ್ನಾಗಿ ಬಲ್ಲವರ ಅಭಿಪ್ರಾಯ. ಇವರ ಮಂಡಲಿಯಲ್ಲಿ ೫೦ ಮಂದಿ ನಟರ ಮೇಲಿದ್ದರು. ಅವರ ಗೃಹಗಳಲ್ಲಿ ಮದುವೆ ಮುಂಜಿಗಳು ಸಂಭವಿಸಿದರೆ ಆಚಾರ್ಯರ ಕಿವಿಗೊಂದು ಮಾತು ಬೀಳುವುದೇ ತಡ, ಖರ್ಚಿನ ಯೋಚನೆ ತಪ್ಪುತ್ತಿದ್ದಿತು. ಮಿತ್ರರು ಯಾರಾದರೂ ಫಲಭಕ್ಷ್ಯಗಳನ್ನು ತೆಗೆದುಕೊಂಡು ಹೋಗಿ ಆಚಾರ್ಯರಿಗೆ ಕೊಟ್ಟರೆ ಮಂಡಳಿಯ ಬಾಲಕರಿಗೆ ಹಂಚಿದಲ್ಲದೆ ಅವರು ಭುಂಜಿಸುತ್ತಿರಲಿಲ್ಲ.

ಆಚಾರ್ಯರೇನೋ ನಮ್ಮನ್ನು ಬಿಟ್ಟು ತೆರಳಿದರು. ಅವರ ಕೀರ್ತಿ, ಔದಾರ್ಯ ನಮ್ಮನ್ನು ಬಿಟ್ಟು ತೆರಳುವಂತಿಲ್ಲ. ಅವರ ಶಿಷ್ಯವರ್ಗದ ನಾಗೇಶರಾಯರು, ಮರಿರಾಯರು, ನಾಗೇಂದ್ರರಾಯರು, ಶೇಷಗಿರಿ ರಾಯರು ಇಂದಿಗೂ ಕಲಾಸೇವೆಯನ್ನೆಸಗುತ್ತಿದ್ದಾರೆ.

## ಹಳೆಯ ನೆನಹು

ಒಂದು ಸಂಧ್ಯಾಕಾಲ. ವರದಾಚಾರ್ಯರೊಂದಿಗೆ ನಾನೂ ಅವ ರೊಬ್ಬ ಆಪ್ತಗಳೆಯರೂ ಒಂದು ಚಲನಚಿತ್ರ ನೋಡಲು ಹೋಗಿದ್ದೆವು. ಗಾಡಿಯನ್ನು ಹತ್ತುವಾಗ ಆಚಾರ್ಯರ ಕೈಗೊಂದು ಸಿಗರು ಚುಚ್ಚಿ ಕೊಂಡಿತು. ಅದನ್ನು ನಾನು ಮೆಲ್ಲಗೆ ತೆಗೆಯುತ್ತಿದ್ದಾಗ ಆಚಾರ್ಯರು 'ಇದೆಲ್ಲಾ ಕೊನೆಯ ದಿನದ ಕಷ್ಟಗಳು' ಎಂದರು. ನನಗೀ ನುಡಿ ಹಲವು ವಿಧದಲ್ಲಿ ಅಚ್ಚರಿಯನ್ನುಂಟುಮಾಡಿತು. ರಾಜ ಮಹಾರಾಜರನ್ನು ಮೀರಿಸುವ ವೈಭವದಲ್ಲಿ ಬಾಳಿದ ನಟ—ರಾಜ ತನ್ನ ಕೊನೆಗಾಲದಲ್ಲಿಂತು ದರಿದ್ರನಂತೆ ವಕ್ರ—ಶಕಟ (ಜಟಕ) ವನ್ನೇರಬೇಕಾಯಿತಲ್ಲಾ ಎಂದು ನೊಂದುಕೊಂಡೆ. ಆದರೂ ಕಿರಿತನದ ತುಂಟತನದಿಂದ 'ಆಚಾರ್ರಿಗೆ ಸಾಯಲಿಕ್ಕೆ ಭಯವೇನೋ?' ಎಂದೆ. ಅದಕ್ಕೆ ಆಚಾರ್ಯರು, ಲೋಕವೇ ತಮ್ಮ ನಗುವಿನೊಳಗಡಗಿಯೋ ಎಂಬಂತೆ ನಕ್ಕು 'ಅದಕ್ಕಲ್ಲ ನನ್ನ ಚಿಂತೆ. ನಾನು ಆರಂಭಮಾಡಿದ ರಂಗಸೇವೆ ಪೂರ್ತಿಯಾಗಲಿಲ್ಲವಲ್ಲಾ ಎಂಬುದು ಮೊದಲನೆಯ ಚಿಂತೆ. ನನ್ನಾನಂತರ ಆ ಹುಡುಗರು (ಸಹನಟರು) ತಬ್ಬಲಿ ಗಳಾಗುತ್ತಾರಲ್ಲಾ, ಎಂಬುದೆರಡನೆಯ ಚಿಂತೆ' ಎಂದರು. ಚಿತ್ರವನ್ನು ನೋಡಿಕೊಂಡು ಮನೆಗೆ ಬರುತ್ತಿದ್ದಾಗ ಆಚಾರ್ಯರು ಮನವನ್ನು ಮಥಿಸು ತ್ತಿದ್ದ ಸಂತಾಪವನ್ನು ತಡೆಯುತ್ತಾ 'ಈ ಕೋಲ್ಮನ್ ವಿಲ್ಯಾಬ್ಯಾಂಕಿ' ಇವರುಗಳ ಯೋಗ್ಯತೆಯನ್ನು ನಮ್ಮವರು ರಂಗಪ್ರಪಂಚದಲ್ಲಿ ಪಡೆಯು ವುದು ಯಾವಾಗ ಮಗೂ' ಎಂದರು. ಮನೆಗೆ ಬಂದೆವು. ಆಚಾರ್ಯರು ತಮ್ಮ ಗೋಧಿಯ ಅಲ್ಪಾಹಾರವನ್ನು ಭುಂಜಿಸಿ ನಮ್ಮೊಂದಿಗೆ ಸಂಭಾಷಿ ಸುತ್ತ ಕುಳಿತಿದ್ದರು. ಆಗ ನಾನು 'ಕೋಲ್ಮನ್—ಬ್ಯಾಂಕಿನವರನ್ನು ಹೊಗ ಳಿದಿರಲ್ಲಾ. ನೀವೇನು ಕಡಿಮೆ ಇರುವಿರಾ—ನಿಮ್ಮ ನಾಗೇಂದ್ರ, ಬೋಧ,

ಮರಿ ಇವರುಗಳೇನು ಕಡಿಮೆಯ ನಟರೇ' ಎನ್ನಲು ಆಚಾರ್ಯರು 'ಮಗೂ, ಹಾಗಲ್ಲ, ಆ ಇಂಗ್ಲೀಷಿನೋರ ಕೆಲಸಾಂದ್ರೆ ಯಾವಾಗಲೂ perfect, ನಮ್ಮದು inspiration ಬಂದಂತೆ. ಅಲ್ಲದೆ ಕೊರ್ಲ್ಕರ್ ಇವರುಗಳ ಮುಂದೆ ನಾನೇನು 'ರಂಗನ ಮುಂದೆ ಸಿಂಗನ ಹಾಗೆ'—ಏನೋ ನಿಮ್ಮಗಳ ಅಭಿಮಾನ ಬಲದ ಮೇಲೆ ನನ್ನ ನಾಟಕ ಸಾಗುತ್ತಾಯಿದೆ' ಎಂದರು. ಆಗಲೇ ೧೦ ಘಂಟೆಯಾಗುತ್ತ ಬಂದಿತ್ತು. ಅಂದು ಆಚಾರ್ಯರ ಮಂಡಳಿಯ 'ಮಹಾಭಾರತ'. ರತ್ನಾವಳಿ ನಾಟಕಶಾಲೆಯು ತುಂಬಿದ ಗೃಹಕ್ಕೆ ಆಡಲ್ಪಡುತ್ತಿತ್ತು. ಹೊತ್ತಾಗುತ್ತ ಬಂದಿದ್ದರೂ, ನಾಟಕ ಶಾಲೆಯ ಕಡೆಗೆ ಆಚಾರ್ಯರ ಮನಸ್ಸು ಹರಿದಿರಲಿಲ್ಲ—ಒಂದು ಬಗೆಯ ನೆನಸು. ನಾನಾಗ ಎಚ್ಚರಿಸಲು 'ಹೋಗುತ್ತೇನಪ್ಪಾ. ಆ ಧಿಮ್ಮಸ ಕುಣಿತ ಕುಣಿಯಲಿಕ್ಕೆ—ಶಾಕುಂತಲ—ರಾಮವರ್ಮವನ್ನು ಕೇಳೋರಿಲ್ಲ—ಈ ಹೊಲಸು ನೋಡಲಿಕ್ಕೆ ತುಂಬುತ್ತಾ ಇದ್ದಾರೆ' ಎಂದಂದು ಕಾಲೆಳೆಯುತ್ತಾ ನಾಟಕ ಶಾಲೆಯನ್ನು ಸೇರಿದರು.

ಆ ದಿನದ ನೆನಹಂತೂ ನನ್ನ ಮನದಲ್ಲಿ ಅಳಿದೇಯಿಲ್ಲ. ಲೋಕವೆಲ್ಲಾ ಆಚಾರ್ಯರನ್ನು ಪ್ರತಿಭಾವಂತ ನಟನನ್ನಾಗಿ ಕಂಡಿತ್ತು. ಆದರೆ ಮನುಷ್ಯ—ಮಾದರಿಯ ಮನುಷ್ಯನನ್ನಾಗಿ ಮಾತ್ರ ಕಂಡಿರಲಿಲ್ಲ. ಇಂಗ್ಲೆಂಡಿನ ಸುಪ್ರಸಿದ್ಧ ನಟನಾಗಿದ್ದ ಎಡ್ಮಂಡ್‌ಕೀನನು ಯಶಸ್ಸು, ಭೋಗ, ಕೀರ್ತಿಗಳ ಸರಸ್ಸುಗಳಲ್ಲಿಯೇ ಮಿಂಯುತ್ತಿದ್ದಾಗ, ಒಂದು ಬಗೆಯ ಅನಿರ್ವಾಹಕ ಚಿಂತೆಯಿಂದ ಕೊರಗುತ್ತಿದ್ದನಂತೆ—ಆ ಚಿಂತೆ ತನ್ನ ನಿಜ ಗುಣವನ್ನು ಜನ ಗೌರವಿಸದಲ್ಲಾ, ವಿಡಂಬನ ಸ್ವರೂಪವನ್ನೇ ಪೂಜಿಸುವುದಲ್ಲಾ—ಎಂಬುದಂತೆ!! ಆಚಾರ್ಯರ ಪರಿಸ್ಥಿತಿಯೂ ಹಾಗೆಯೇ ಆಗಿದ್ದಿತು. ಅವರನ್ನು ಸುತ್ತುಗಟ್ಟಿದ್ದವರು ವಂದಿಮಾಗಧರು, ಯಾಚಕರು, ಅನಾಥರು, ಹಾಗೂ ಸ್ವಾರ್ಥಪರರು. ಅವರು ಪೂಜಿಸುತ್ತಿದ್ದುದು ವರದಾಚಾರ್ಯನ ಗುಣವನ್ನಲ್ಲ, ಹಣವನ್ನು. ಇದನ್ನು ಆಚಾರ್ಯ ಅರಿಯದಿರಲಿಲ್ಲ. ಆದರಾತನ ಉದಾತ್ತವಾದ ವಿಶಾಲ ಹೃದಯ ಯಾರ ಮನಸ್ಸನ್ನೂ, ಯಾವ ಕಾರಣಕ್ಕೂ ನೋಯಿಸಲೊಪ್ಪುತ್ತಿರಲಿಲ್ಲ. ಸರ್ ಹೆನ್ರಿ ಅರ್ವಿಂಗನು ಷೇಕ್ಸ್‌ಪಿಯರಿನ ನಾಟಕಗಳು ಅಜ್ಞಮಂಡಳಿಗಳ

ನಟರಿಂದ ಕೊಲೆಯಾಗುವುದನ್ನು ಕಂಡಾಗ ನೊಂದು ಬೆಂದು ಕೊರಗು ತ್ತಿದ್ದನಂತೆ. ನಟರು ಷೇಕ್ಸ್‌ಪಿಯರನ ಪಾತ್ರಗಳನ್ನು ಕೆಡಿಸಿದರೆಂದಲ್ಲಾ ವ್ಯಥೆ—ಆ ಪಾತ್ರಗಳು ಕೆಡಿಸಲ್ಪಟ್ಟವಲ್ಲಾ ಎಂದು ವ್ಯಥೆ! ಪಾತ್ರಗಳೊಂ ದಿಗೆ ಬೆರೆತು ಬೆರೆತು ಅರ್ವಿಂಗ್ ತಾದಾತ್ಮ್ಯತೆಯ ತಿರುಳನ್ನರಿ ತಿದ್ದ. ಅವೇ ತಾನು, ತಾನೇ ಅವು. ಹಾಗೆಯೇ ದುಷ್ಯಂತ, ರಾಮ ವರ್ಮ ಸಂತಾಪಕರನ್ನು ತಿರಸ್ಕರಿಸಿ ರಾವಣ, ಕೀಚಕ, ಶಿಶುಪಾಲರನ್ನು ಜನತೆ ಪೂಜಿಸಹೊರಟಾಗ ಆಚಾರ್ಯ ಜನತೆಯನ್ನು ದೂಷಿಸುತ್ತಿರ ಲಿಲ್ಲ—ದುಷ್ಯಂತ, ರಾಮವರ್ಮ, ಸಂತಾಪಕರಿಗೆ ಅಪಮಾನವಾಯಿ ತಲ್ಲಾ ಎಂದು ಸಂತಾಪ ಪಡುತ್ತಿದ್ದರು. ಈ ಸಂತಾಪದ ನೋವು, ಸುಮಾರು ನಲವತ್ತು ವರ್ಷಗಳು ರಂಗಭೂಮಿಯ ಸೇವೆಯನ್ನು ಒಮ್ಮನ ಸ್ಸಿನಿಂದ ಮಾಡಿದ ಆಚಾರ್ಯರಿಗಲ್ಲದೆ ಬೇರೆಯವರಿಗೆ ಹೇಗಾಗಬೇಕು? ಕಾಲತ್ರಯದಲ್ಲಿಯೂ ಹೊಸಹೊಸ ಸುಧಾರಣೆಗಳನ್ನೇ ಚಿಂತಿಸುತ್ತ, ಜನ ತೆಯ ಅಭಿರುಚಿಯನ್ನು ದಿನದಿನಕ್ಕೆ ಸ್ಫುಟಗೊಳಿಸಲು ಹವಣಿಸುತ್ತಿದ್ದುದೇ ಆಚಾರ್ಯರ ಕಲೆಗೊಂದು ಅಪೂರ್ವ ಕಳೆಯನ್ನು ಕೊಟ್ಟದ್ದುದು. ಕೊನೆ ದಿವಸಗಳಲ್ಲಿ, ತಮ್ಮ ರುಗ್ಣಶಯ್ಯೆಯ ಮೇಲೆ ಹೊಸರಂಗ ಸಿದ್ಧತೆಗಳನ್ನು ನಿಯೋಜಿಸಿ ಅಂತೆಯೇ ತಮ್ಮ 'ಸತ್ಯವರ್ಮ ಚರಿತ್ರೆ' ಎಂಬ ಹೊಸ ನಾಟಕವನ್ನು ಸಿದ್ಧಗೊಳಿಸಲು ಮಂಡಳಿಯ ಅಧಿಕಾರಿಯೊಬ್ಬನಿಗೆ ಆಚಾ ರ್ಯರು ಆಜ್ಞಾಪಿಸಿದ್ದರು. ರಾಮವರ್ಮ—ನಿರುಪಮಾ ಮೊದಲಾದ ವಿದೇಶೀಯ ನಾಟಕಗಳಿಗೆ ಯುಕ್ತವಾತಾವರಣವನ್ನು ಕಲ್ಪಿಸಲು, ಒಂದು ಪಿಯಾನೋವನ್ನು ತನಗಾಗಿ ಕೊಳ್ಳೆಂದು ಮಿತ್ರರೊಬ್ಬರಿಗೆ ವಿಜ್ಞಾಪಿಸಿ ಕೊಂಡಿದ್ದರು. ಅವು ತೀರದ ಆಸೆಗಳಾದವು.

ಆಚಾರ್ಯರಿಗೆ ಬಹಳ ಅಹಂಕಾರವಿತ್ತೆಂದು ಕೆಲಬರಾಡಿಕೊಂಡಿರು ವುದು ನನ್ನ ಕಿವಿಗೂ ಬಿದ್ದಿದೆ. ಇದು ಅವರನ್ನರಿಯದವರಾಡುವ ಮಾತೆಂದು ನಿರ್ಭೀತಿಯಿಂದ ಹೇಳಬಹುದು. ಒಮ್ಮೆ ನಾನು "ಆಚಾರ್ಯರೇ ಷೇಕ್ಸ್‌ಪಿಯರಿನ 'Romeo & Juliet' ಯನ್ನು ನೀವು ತೆಗೆದುಕೊಂಡಿರು ವಂತೆ 'Hamlet, Othello' ನಾಟಕಗಳನ್ನೇಕೆ ತೆಗೆದುಕೊಳ್ಳಬಾರದು' ಎಂದು ಕೇಳಿದುದಕ್ಕೆ ಆಚಾರ್ಯರು 'ಏನು? ನಾನು Hamlet 'Othello

ಗಳನ್ನಭಿನಯಿಸುವುದೇ ? ರಾಘವಾಚಾರ್ಯರ ಮುಂದೆ ಯಾರು ನಿಂತಾರು ಮಗೂ. ಅವರ Hamlet ಪ್ರಾಯಶಃ ಅರ್ವಿಂಗ್ ನೋಡಿದ್ದಲ್ಲಿ ಅವನೂ ಹಾಗೆಯೇ ಹೇಳುತ್ತಿದ್ದ' ಎಂದರು. ಒಬ್ಬ ವರನಟ ಇನ್ನೊಬ್ಬ ವರನಟನಿಗೆ ತೋರುವ ಈ ಪೂಜ್ಯ ಭಾವಕ್ಕಿಂತಲೂ ಹೆಚ್ಚಿನದು ಬೇಕೇನು? ಮತ್ತೊಮ್ಮೆ ನಾನು 'ನಿಮ್ಮ ಶಿಷ್ಯ ನಾಗೇಶರಾಯರ ಸಂಗೀತದ ವಿಚಾರ ಏನನ್ನುವಿರಿ' ಎಂದಾಗ ಆಚಾರ್ಯರು 'ಆತ ನನ್ನ ಶಿಷ್ಯವೃತ್ತಿಯೇನೂ ಮಾಡಲಿಲ್ಲ. ನಾನು ಹಾಡುತ್ತಿದ್ದುದನ್ನು ಕೇಳಿ ಕೇಳಿ ಅಷ್ಟರಮಟ್ಟಿಗೆ ಕೆಲಸ ತೋರಿಸುತ್ತಾನೆ. ಸಂಗೀತದಲ್ಲಿ, ಕೆಲವು ಭಾಗಗಳಲ್ಲಿ ನನಗಿಂತಲೂ ಮಿಗಿಲಾದ ಕೈಯೇ' ಎಂದರು. ನಟರಾದ ನಾಗೇಂದ್ರ, ಮರಿ, ನರಸಿಂಹಯ್ಯ ಇವರುಗಳ ವಿಚಾರವೆತ್ತಿದಾಗಂತೂ ಆಚಾರ್ಯರ ಪ್ರತಿಯೊಂದು ಅಂಗಾಂಗವೂ ಕಿವಿಯಾಗುತ್ತಿದ್ದಿತು. ಕಂಗಳಲ್ಲಿ ಆನಂದಾಶ್ರುಗಳು ಮಿಡಿಯುತ್ತಿದ್ದವು. ಅವುಗಳ ಹಿಂದಿನ ಭಾವನೆಯಾದರೋ 'ನನ್ನ ಹುಡುಗರು. ಮುಂದಕ್ಕೆ ಬಂದರು' ಎಂಬುದೇ. ಒಂದೆರಡು ಬಾರಿ ಅಹಂಕಾರಮತ್ತರನ್ನು ಆಚಾರ್ಯರು ಹದಗೊಳಿಸಿರುವುದೂ ಉಂಟು. ಇದು ಅವರನ್ನು ಪರಿಭವಗೊಳಿಸಿ-ತಮ್ಮ ಜಯಭೇರಿಯನ್ನು ಹೊಡೆಯಲಿಕ್ಕಲ್ಲ–ಅವರಿಗೆ ತಮ್ಮ ನಿಜಸತ್ವದ ಅರಿವನ್ನುಂಟುಮಾಡಿಕೊಡಲಿಕ್ಕೆ. ಜರ್ಮನಿಯ ಸುಪ್ರಸಿದ್ಧ ಸಂಗೀತಗಾರನೂ, ಗೀತಾರಚಕನೂ ಆದ ಎಮಿಲ್ ಲಡ್ವಿಗ್ ಬೀಥೊವನ್ನನಿಗೆ ಒಬ್ಬ ಅಣ್ಣನಿದ್ದನಂತೆ. ತಮ್ಮನು ಅವಿನಾಶಿಯಾದ ಕಲೆಯ ಹಾದಿಯನ್ನು ಹಿಡಿದು ತಿರುಕನಾದ—ಅಣ್ಣ ಜಗತ್ಸೂತ್ರದ ಬೇರೊಂದು ಕೊನೆಯನ್ನು ಹಿಡಿದು ಸಿರಿವಂತನಾಗಿದ್ದ. ಒಮ್ಮೆ ಅಣ್ಣ ಜಾನನು ತಮ್ಮನನ್ನು ತನ್ನ ಮನೆಯೊಂದೌತಣಕ್ಕೆ ಆಹ್ವಾನಿಸಲು ಬಂದ. ಆಗ ಮನೆಯಲ್ಲಿ ತಮ್ಮನಿಲ್ಲದಿರಲು ತನ್ನ ಭೇಟಿಯ ಚೀಟಿಯನ್ನು ಬಿಟ್ಟು ಹೋದ. ಸ್ವಲ್ಪಕಾಲಾನಂತರ ಎಮಿಲ ಬಂದ. ಅಣ್ಣನ ಚೀಟಿಯನ್ನು ನೋಡಿ ಕೆರಳಿದ. ಅದರಲ್ಲಿದ್ದ

John Ludwig Beethovan,
Landed proprietor.

ಎಂಬುದು ಅವನ ಆತ್ಮಗೌರವನ್ನು ಮೂದಲಿಸಿದಂತಿದ್ದಿತು. ಕೂಡಲೆ ಅಣ್ಣನ ಮನೆಗೆ ಹೋಗಿ ತನ್ನ ಭೇಟಿಯು ಚೀಟಿಯನ್ನು ಬಿಟ್ಟುಬಂದ. ಅದರಲ್ಲಿದ್ದುದು—

Emil Ludwig Beethovan,
Brain proprietor.

ಇಂತಹ ನಡತೆಗೆ ಆಚಾರ್ಯರನ್ನು ಪ್ರೇರೇಪಿಸುತ್ತಿದ್ದುದು ಆತ್ಮ ಗೌರವವಲ್ಲದೆ ಸ್ವಪ್ರತಿಷ್ಠೆಯಲ್ಲ. ಒಮ್ಮೆ ಆಚಾರ್ಯರ ಸಂಘದಲ್ಲಿ ಒಬ್ಬ ಸುಪ್ರಸಿದ್ಧ ಆಸ್ಥಾನ ಸಂಗೀತ ವಿದ್ವಾಂಸರಿದ್ದರು. ಅವರು 'ಆಚಾರ್ಯರಿಗೆ ಶಾಸ್ತ್ರೀಯ ಸಂಗೀತದ ಜ್ಞಾನವಿಲ್ಲ' ಎಂದಂದ್ದಿದ್ದುದು ಆಚಾರ್ಯರ ಕಿವಿಯನ್ನು ಮುಟ್ಟಿತು. ಮನ್ಮಥ ವಿಜಯ ನಾಟಕ—ಮನ್ಮಥನ ಪಾತ್ರ ಧರಿಸಿ ಬಂದಾಗ ಆಚಾರ್ಯರು ತಮ್ಮೊಲವಿನ 'ಭಳಿರೆ-ಭಳಿರೆ' ಹಾಡನ್ನು ಹೊಸ ತಾಳ ಗಣಿಕೆ ಮಾಡುತ್ತ, ಹೊಸ ಹೊಸ ರಾಗಗಳಲ್ಲಿ ಸುಮಾರು ೧ ಘಂಟೆಯ ಕಾಲ ಹಾಡಿದರು. ಪ್ರೇಕ್ಷಕರಂತೂ ದಿಗ್ಭ್ರಾಂತರಾಗಿ ಹೋಗಿದ್ದರು. ಉತ್ತರಾರ್ಧದಲ್ಲಿ ಸಂಗೀತ ವಿದ್ವಾಂಸರು 'ಪ್ರದ್ಯುಮ್ನ' ಪಾತ್ರದಲ್ಲಿ ಬಂದು ಹಾಡಲಿಕ್ಕೆ ನಿಂತಾಗ 'ಹೋಗಯ್ಯಾ ತಂಬೂರಿ ಹಿಡಿದು ತಿರುಪಕ್ಕೆ—ಇಲ್ಯಾಕೆ ಬಂದೆ' ಎಂದು ಪ್ರೇಕ್ಷಕರು ಕೂಗಿದರಂತೆ. ಅಂದಿನಿಂದ ವಿದ್ವಾಂಸರು ರಂಗಭೂಮಿಗೇ ಶರಣು ಹೊಡೆದರಂತೆ.

ಗ್ರೀಕರ ಹಾಗೂ ಆಂಗ್ಲೇಯರ ರುದ್ರ ನಾಟಕಗಳಲ್ಲಿ ನಾಯಕ ಸರ್ವ ಸದ್ಗುಣಭರಿತನಾಗಿ ಒಂದೆರಡು ದೌರ್ಬಲ್ಯಗಳ ದಾಸನಾಗಿರಬೇಕು. ಅವುಗಳ ಪ್ರಭಾವದಿಂದ ಅವನ ಕೊನೆಗಾಲ ಬರಬೇಕೆಂಬುದು ಮೂಲ ಸೂತ್ರ. ಇದನ್ನೇ ಆಚಾರ್ಯರ ಜೀವನದ ಬಗ್ಗೆಯೂ ಅನ್ವಯಿಸಬಹುದು. ನಾಟ್ಯ ಸಂಗೀತ ನಿಪುಣ, ರಸಿಕಾಗ್ರಣಿ, ದಾನವೀರ, ವಿಶ್ವಪ್ರೇಮಿ-ಇಂತಹ ಆಚಾರ್ಯರು, ಇತರರ ಕೃಪೆಗೊಳಪಟ್ಟು, ಕ್ಷುಲ್ಲಕಜೀವಿಯಂತೆ ಸಾರ್ವಜನಿಕ ಆಸ್ಪತ್ರೆಯಲ್ಲಿ ಸಾಯಬೇಕಾಯಿತು. ಆರ್ಥಿಕ ಅವನತಿ ಅವರಿಗುಂಟಾದುದು, ಸಿಸ್ತನ್ನರಿಯದ, ಮಿತಿಯ ಮೇರೆಯನ್ನು ಕಾಣದ ಪ್ರೇಮ ಔದಾರ್ಯಗಳಿಂದ. ಕೆಲಬರಲ್ಲಿ ಔದಾರ್ಯವೆಂಬುದೊಂದು ವಿಶೇಷ ಗುಣವಾಗಿದ್ದಲ್ಲಿ ಆಚಾರ್ಯರಲ್ಲಿಯದು ಪ್ರಬಲವ್ಯಾಧಿಯಂತೆ ನೆಲಸಿದ್ದಿ

ತೆಂದಲ್ಲಿ ಅತಿಶಯೋಕ್ತಿಯಾಗದು. ಸೌದೆಯನ್ನು ಕೇಳಬಂದ ಬ್ರಾಹ್ಮಣನಿಗೆ ಕರ್ಣ ಅರಮನೆಯ ತೊಲೆದೂಲಗಳನ್ನು ಕಡಿಸಿಕೊಟ್ಟನಂತೆ !! ಇದು ಹಳೆಯ ಕತೆಯಾಯಿತು. ಮಗನ ಉಪನಯನ ಮಾಡುತ್ತೇನೆಂದು ಬಂದ ಬ್ರಾಹ್ಮಣನಿಗೆ ಆಚಾರ್ಯರು ತಾವುಣ್ಣುವ ಬೆಳ್ಳಿಯ ತಟ್ಟೆಯನ್ನು ದಾನಮಾಡಿದ್ದಾರೆ. ಉಡಲು ಬಟ್ಟೆಯನ್ನು ಕೇಳಿದ ವಿಧವೆಗೆ, ಮಂಡಳಿಯ ವಸ್ತ್ರಗಳನ್ನು ಎದುರಿಗೆ ಹರಡಿ ನಿನಗೆ ಬೇಕಾದುದನ್ನು ತೆಗೆದುಕೊಂಡು ಹೋಗೆಂದು ಹೇಳಿದ್ದಾರೆ. ಹೊದೆಯಲು ವಸ್ತ್ರಕೇಳಿದ ಭಿಕ್ಷುಕನಿಗೆ ತಾವು ಧರಿಸಿದ ಸರ್ಜ್ ಕೋಟನ್ನು ದಾನಮಾಡಿದ್ದಾರೆ. ತಂಗಿಯ ಮದುವೆಗೆ ಹಣ ಕೇಳಿದ ಮಂಡಳಿಯ ನಟನಿಗೆ, ತಮ್ಮ ದುರ್ಭಿಕ್ಷಕಾಲದಲ್ಲಿ ಕೂಡ ಇತರರಿಂದ ಸಾಲಮಾಡಿ ನಾಲ್ಕು ನೂರು ರೂಪಾಯಿಗಳ ವರೆಗೆ ದಾನ ಮಾಡಿದ್ದಾರೆ. 'ದೇಹಿ' ಎಂದು ಬಂದವರಿಗೆ 'ನಾಸ್ತಿ' ಎಂದು ಆಚಾರ್ಯರಂದದ್ದು ಯಾರೂ ಕನಸಿನಲ್ಲಿ ಕೂಡ ಕೇಳಿಲ್ಲ. ದಾನಕೊಡುವಾಗ ಅವರ ಮನೋಭಾವನೆ 'ಕೊಡಲು ನಾನೇನು ಜಗದೀಶ್ವರನೇ-ನಾನು ಯಾವ ಮಹಿಮನೆಂದು ನನ್ನಲ್ಲಿ ಇವರು ಬರುವರು. ಕೊಡುವಲ್ಪವನ್ನು ಇವರು ಸ್ವೀಕರಿಸಿದಲ್ಲಿ ವಂದನಾರ್ಹ ನಾನಲ್ಲ ಅವರು-ಯಾಕೆಂದರೆ ಅವರು ಹಾಗೆ ನನ್ನ ಜನ್ಮವನ್ನು ಪಾವನಗೊಳಿಸಿದರು' ಎಂಬುದೇ ಆಗಿರುತ್ತಿದ್ದಿತು. ಕಂಪೆನಿಯ ನಟರ ಬಗ್ಗೆಯಂತೂ ಅನ್ಯಾದೃಶ್ಯವಾದ ಪಿತೃವಾತ್ಸಲ್ಯ. ತಮಗಾಗಿ ಯಾರಾದರೂ ಗೆಳೆಯರು ತಿನಿಸುಗಳನ್ನು ತಂದಿತ್ತರೆ ಮಂಡಳಿಯ ಕಿರಿಯರಿಗಿತ್ತ ಹೊರತೂ ಆಚಾರ್ಯರು ಅವುಗಳನ್ನು ಮುಟ್ಟರು. ಮಂಡಳಿಯ ಅಧಿಕಾರವೆಲ್ಲಾ ನಟರ ಕೈಯಲ್ಲಿ-ಅವರು ಮಾಡಿದುದೇ ಒಪ್ಪು. ಹೀಗಾಗಿ ಯಾವುದೂ ವ್ಯವಸ್ಥೆಯಿಲ್ಲದೆ ಹೋಯಿತು. ಹಣವನ್ನು ನಟ ದುರ್ವ್ಯಯ ಮಾಡುತ್ತಿದ್ದಾನೆಂದು ಯಾರಾದರೂ ಆಚಾರ್ಯರಲ್ಲಿ ದೂರು ಹೇಳಿದರೆ ಸ್ವಭಾವಜನ್ಯವಾದ ಶಾಂತಚಿತ್ತದಿಂದ 'ಖರ್ಚು ಮಾಡುತ್ತಿರುವವನು ನಮ್ಮ....ತಾನೇ, ಬೇರೆಯವರಲ್ಲವಲ್ಲ ಹೋಗಲಿ ಬಿಡು-ತಿಂದರೂ ನಮ್ಮವನೇ ತಿನ್ನುತ್ತಾನೆ' ಎಂದು ಮಾರುತ್ತರ ನುಡಿಯುತ್ತಿದ್ದರು.

ಪ್ರಾಚೀನ ಭಾರತದಲ್ಲಿ ಒಮ್ಮೆಲೇ ನಾಲ್ಕೈದು ಕೆಲಸಗಳನ್ನು ಮಾಡುತ್ತಿದ್ದ ಪ್ರತಿಭೆ ಕೆಲವರಿಗಿರುತ್ತಿದ್ದಿತಂತೆ-ಎಷ್ಟು ನಿಜವೋ ಏನೋ-ಆದರೆ

ಆ ಗುಣ ಆಚಾರ್ಯರಲ್ಲಿದ್ದುದನ್ನು ನಾನು ಕಂಡಿದ್ದೆ. ಪಾತ್ರಕ್ಕೆ ತಕ್ಕಬಣ್ಣ ಉಡಿಗೆತೊಡಿಗೆಗಳನ್ನು ಧರಿಸುತ್ತಿರುವಂತೆಯೇ, ಆಹ್ವಾನಪತ್ರಗಳ ವಿಚಾರ, ಬಾಲಕರ ಆರೋಗ್ಯ ಊಟಉಪಚಾರಗಳ ಬಗ್ಗೆ ತನಿಖೆ, ರಂಗಸಿದ್ಧತೆಯ ವಿಚಾರ ಸಲಹೆಗಳು, ಜೊತೆಗೆ ತಮ್ಮ ಪಾತ್ರಾಭಿನಯದ ವಿಚಾರದಲ್ಲಿ ಆಗಬೇಕಾದ ಸುಧಾರಣೆಗಳನ್ನು ಚಿಂತಿಸುತ್ತಿದ್ದರು.

ಆಚಾರ್ಯರು ಅಂತಹ ನುರಿತ ನಟರಾಗಿದ್ದರೂ, ಯುಕ್ತವಾದ ಸಲಹೆಗಳನ್ನು ಯಾರಿತ್ತರೂ ಹೇಗೆ ಸ್ವೀಕರಿಸುತ್ತಿದ್ದರೆಂಬುದಕ್ಕೆ ಒಂದು ದೃಷ್ಟಾಂತವುಂಟು. ಒಮ್ಮೆ 'ಕೀಚಕವಧೆ' ಯಾಗಬೇಕು. ಆಚಾರ್ಯರು 'ಕೀಚಕ' ಪಾತ್ರಕ್ಕೆ ಅಂದವಾಗಿ ಬಣ್ಣ ಹಾಕಿಕೊಂಡು, ಮುದ್ದಾಗಿ ಯೊಂದು ಚಿಗುರು ಮೀಸೆಯನ್ನು ಧರಿಸಿ, ಹೋಲಿಕೆಯೊಪ್ಪುವಂತೆ ಗುಲಾಬಿ ಬಣ್ಣದ ರೇಶ್ಮೆಯ ಬನೀನನ್ನು ಧರಿಸಿ ಪಕ್ಕದಲ್ಲಿದ್ದ ನನ್ನಕಡೆ ತಿರುಗಿ 'ಹೇಗಿದೆ ಮಗೂ,' ಎಂದರು. ಆಗ ನಾನು ಕೇವಲ ಕಿರಿಯ. ಎಳೆ ದಿನಗಳ ಹುರುಪಿನಲ್ಲಿ, ಬಹು ಬಲ್ಲವನಂತೆ " ನೀವಿಂದು ಅಭಿನಯಿಸುತ್ತಿರು ವುದು ಕೀಚಕನ ಪಾತ್ರವೋ–ವತ್ಸರಾಜನ ಪಾತ್ರವೋ " ಎಂದೆ. ನನ್ನ ಗ್ರಹಿಕೆಯಾಗಿದ್ದುದು ಕೀಚಕನು ವತ್ಸರಾಜನಂತೆ ಸುಂದರನೂ ಅಲ್ಲ, ದಯಾಳುವೂ ಅಲ್ಲವೆಂದು. ನನ್ನ ಸಲಹೆಯನ್ನು ಸ್ವೀಕರಿಸಿದಾಚಾರ್ಯರು ಕೂಡಲೆ ವೇಷಭೂಷಣಗಳನ್ನು ಕೀಚಕನ ಗುಣಕ್ಕೊಪ್ಪುವಂತೆ ಮಾರ್ಪ ಡಿಸಿಕೊಂಡರು. ಈ ಗುಣ ನಮ್ಮ ನಟರಲ್ಲಿ ಎಷ್ಟುಮಂದಿಗೆ ಇರುವುದು ?

ಇಂತು ಆಚಾರ್ಯರ ಗುಣಕಥನ ಎಷ್ಟುಮಾಡಿದರೂ ಮನ ತಣಿ ಯದು. ಯಾಕಂದರೆ ಅಂತಹ ಕಲಾವಿಭೂತಿಯ ವಿಯೋಗದಿಂದ ಪರಿ ತಪ್ತವಾಗಿರುವ ಹೃದಯಕ್ಕೆ ಗುಣಕಥನವೇ ಒಂದು ಬಗೆಯ ಸಮಾಧಾನ.

———



ವಾಸುದೇವ

[ಪುಟ ೫೭

# ೯. ವಾದ್ಯವಾದನ ನಿಪುಣ ವಾಸುದೇವ

ಕಳೆದ ವರ್ಷ ಧಾರವಾಡದ ಕರ್ನಾಟಕ ಸಂಘದ ವಾರ್ಷಿಕೋತ್ಸವ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ನಡೆದಾಗ ಒಬ್ಬ ಎಳೆಯ ವಯಸ್ಸಿನ ಬಾಲಕನ ಹಾರ್ಮೋನಿಯಂ ವಾದ್ಯವಾದನವೂ ಕಾರ್ಯ ಕ್ರಮಗಳಲ್ಲಿ ಒಂದಾಗಿತ್ತು. ಬಾಲಕನ ಕಲಾಕೌಶಲ್ಯವನ್ನು ಮೆಚ್ಚುತ್ತಾ ಶ್ರೀ ಮಾಸ್ತಿಯವರು ಅವನನ್ನು ಶ್ರೀ ಕೃಷ್ಣನಿಗೂ ಅವನ ವಾದ್ಯವನ್ನು ಕೃಷ್ಣನ ಮುರಳಿಗೂ ಹೋಲಿಸಿದರಂತೆ.

ಈ ವರ್ಷ ಮಾರ್ಚಿ ತಿಂಗಳಲ್ಲಿ ಮುಂಬಯಿ ಕರ್ನಾಟಕ ಸಂಘದ ಪರವಾಗಿ ನನ್ನ ಉಪನ್ಯಾಸವೊಂದು ಮುಂಬಯಿಯಲ್ಲಿ ಏರ್ಪಾಡಾಗಿತ್ತು. ಕಾರ್ಯಕ್ರಮವನ್ನು ನನಗೆ ತಿಳಿಸುವುದಕ್ಕೆ ಬಂದಿದ್ದ ಸಂಘದ ಮಿತ್ರರು ಹುಬ್ಬಳ್ಳಿಯ ಚಿ॥ ವಾಸುದೇವನ ಹಾರ್ಮೋನಿಯಂ ವಾದ್ಯವಾದನವೂ ಕಾರ್ಯಕ್ರಮಗಳಲ್ಲಿ ಒಂದೆಂದು ತಿಳಿಸಿದರು. ಅವರ ಜತೆಯಲ್ಲಿ ಕಿರಿಯ ಕಲಾವಿದನ ಗುಣವರ್ಣನೆಯನ್ನು ಮಾಡುತ್ತ ಪೂಜ್ಯ ಮಾಸ್ತಿಯವರು ಹೇಳಿದ ಮಾತನ್ನೂ ತಿಳಿಸಿದರು. ಮಾಸ್ತಿಯವರ ಹೃದಯವನ್ನು ಅರಿತವರಿಗೆ ಅವರ ಗುಣಮನ್ನಣೆಯ ವಿಶಾಲ, ಉದಾರ ಹೃದಯದ ಪರಿಚಯವೂ ಇದ್ದೇ ಇರಬೇಕು. ಕಲಾವಿದ ಕೇವಲ ಚಿಕ್ಕವನೆಂದೂ, ಅವನಿಗೆ ಪ್ರೋತ್ಸಾಹಕವಾಗಿರಲೆಂದೂ ನಾಲ್ಕು ಮಾತುಗಳನ್ನವರು ಉತ್ಪ್ರೇಕ್ಷೆ ಮಾಡಿರಬಹುದೆಂದು ನಾನು ಭಾವಿಸಿದೆ.

ಕನ್ನಡ ಕಲೆಗಳ ಮೇಲೆ ನನ್ನ ಭಾಷಣವನ್ನು ಮುಗಿಸಿ ಕುಳಿತೆ. ಕನ್ನಡ ಭೀಷ್ಮ ಶ್ರೀ ಮುದವೀಡು ಕೃಷ್ಣರಾಯರು ಅಧ್ಯಕ್ಷಸ್ಥಾನದಿಂದ ಚೆಲುವು ನುಡಿಯನ್ನೊರೆದು ಎಲ್ಲರನ್ನೂ ತಣಿಸಿದರು. ಕಾರ್ಯದರ್ಶಿಗಳು ಒಂದು ಹಾರ್ಮೋನಿಯಂ ವಾದ್ಯವನ್ನು ತಂದು ವೇದಿಕೆಯ ಮೇಲಿಟ್ಟರು. ಹಾಲು ಹಸುಳೆಯಂತಿದ್ದ ಒಬ್ಬ ಬಾಲಕ ತಂದೆಯ ಜತೆ ಬಂದು ಅದರ ಮುಂದೆ ಕುಳಿತ. ಸಭೆಯಲ್ಲಿ ಸಾಕಷ್ಟು ನಿಶ್ಯಬ್ದತೆಯಿರಲಿಲ್ಲ. ಬಾಲಕನ ಉದ್ದಕ್ಕೂ ಇದ್ದ ಹಾರ್ಮೋನಿಯಂ, ಅದರ ಮುಂದೆ ನಸುನಗುತ್ತಾ ಕುಳಿತಿದ್ದ ಸೌಮ್ಯಾಕೃತಿಯ ವಾದ್ಯಗಾರನನ್ನು ನೋಡಿ ನನ್ನ ಕುತೂಹಲ ಕೆರಳಿತು.

ಆಗಾಗ್ಗೆ ಹಿಂದೂಸ್ಥಾನದ ಪ್ರಸಿದ್ಧ ಹಾರ್ಮೋನಿಯಂ ವಾದ್ಯವಾದನ ನಿಪುಣರಾದ ಗೋವಿಂದರಾವ್ ತೇಂಬೆ, ಕೋರಗಾವಂಕರ್, ಹನುಮಂತ ರಾವ್ ವಾಳವೇಕರ್, ಅಂಬಾಪ್ರಸಾದ ಮೊದಲಾದವರನ್ನು ನಾನು ಕೇಳಿದ್ದರೂ ಆ ವಾದ್ಯದ ಬಗ್ಗೆ ಸಾಕಷ್ಟು ಗೌರವ ಪ್ರೇಮಗಳು ನನ್ನಲ್ಲಿ ಮೂಡಿರಲಿಲ್ಲ. ನಮ್ಮ ದೇಶದ ಸಂಗೀತಕ್ಕೆ, ಅದರಲ್ಲಿಯೂ ಲಯಪ್ರಧಾನವಾದ ಉತ್ತರಾದಿ ಸಂಗೀತಕ್ಕೆ ಹಾರ್ಮೋನಿಯಂ ದೊಡ್ಡ ಶತ್ರು ಎಂದು ನನ್ನ ಮನವರಿಕೆಯಾಗಿತ್ತು. ಸಂಗೀತದಲ್ಲಿ ಶ್ರುತಿಯ ಕಡೆಗೆ ಲಕ್ಷ್ಯವಿಟ್ಟವರಿಗೆ ಹಾರ್ಮೋನಿಯಂ ವಾದ್ಯಕ್ಕಿಂತ ಕರ್ಕಶ ವಾದ್ಯ ಬೇರೊಂದು ಕಂಡು ಬರುವುದಿಲ್ಲ.

ಈ ಅಭಿಪ್ರಾಯ ತಳೆದಿದ್ದ ನನಗೆ ನಮ್ಮ ಬಾಲಕಲಾವಿದ ವಾಸುದೇವನ ಬಗ್ಗೆ ಒಮ್ಮೆಲೇ ಅಭಿಮಾನ ಮೂಡದಿದ್ದುದು ಆಶ್ಚರ್ಯವಲ್ಲ. ವಾಸುದೇವ ಹಾರ್ಮೋನಿಯಂ ಮೇಲೆ ಕೈಯಾಡಿಸಲು ತೊಡಗಿದ. ಒಂದೆರಡು ಆವರ್ತ ನುಡಿಸುತ್ತಲೇ ನಾನು ನೆಟ್ಟಗೆ ಕುಳಿತೆ. ಪೂರ್ಯಾರಾಗದಲ್ಲಿ ಅಸ್ತಾಯಿ ನುಡಿಸಿ ರಾಗಾಲಾಪನೆಯನ್ನು ತೆಗೆದುಕೊಂಡ. ನಾನು ಸ್ತಬ್ಧನಾಗಿಬಿಟ್ಟೆ. ತಿದಿಯನ್ನು ಒತ್ತಿ ಕೈಬಿಟ್ಟು, ಒಂದೆರಡು ಆವರ್ತ ನುಡಿಸಿ ಲಾಸ್ಯಮಾಡಿದಂತೆ ತನ್ನ ಮುದ್ದಾದ ಕೈಯಿಂದ ರಾಗದ ವೈಖರಿ ಗುಣಿಸುತ್ತಿದ್ದ ಬಗೆಯಲ್ಲಿ ಆಳವಾದ ಅನುಭವದ ಹೊಗರಿತ್ತು. ಕಣ್ಣುಗಳಲ್ಲಿ ಭಾವದ ಆವೇಶ ತುಂಬಿ ತುಳುಕುತ್ತಿತ್ತು. ಮುಂದೆ ಚೀಸನ್ನು ಬೆಳೆಸುತ್ತ ಹೋದ. ತಾನಗಳ ಸರದಿ ಬಂತು. ನುರಿತ ಸಂಗೀತಗಾರರಿಗೆ

ಮಾತ್ರ ಸಾಧ್ಯವಾಗುವ ಬೋಲ್‌ತಾನಗಳ ನಿರ್ವಹಣವಾಯಿತು. ಸೂರ್‌-ತಾನಗಳು ಹದವರಿತು ಕ್ರಮಾಗತವಾಗಿ ಬಂದವು, ಸಂಪ್ರದಾಯದಲ್ಲಿದ್ದ ಗಾಂಭೀರ್ಯ, ರಾಗನಿಯೋಜನೆಯಲ್ಲಿದ್ದ ಪ್ರತಿಭೆ, ವಾದ್ಯವಾದನದಲ್ಲಿದ್ದ ಸೌಕುಮಾರ್ಯತೆ, ಸಭೆಯನ್ನೆದುರಿಸುವುದರಲ್ಲಿದ್ದ ಎದೆಗಾರಿಕೆ ನನ್ನನ್ನು ಅರೆಮೂಕನನ್ನಾಗಿಸಿಬಿಟ್ಟವು. ಇದು ಕಲಿತರೆ ಬರುವ ವಿದ್ಯೆಯೇ ? ಐದಾರು ವರ್ಷಗಳಿಗೆ ಮೀರದ ಈ ಮಗುವಿನ ತಲೆಯಲ್ಲಿ ಇಷ್ಟು ಸತ್ವವನ್ನು ತುಂಬು ವುದಾದರೂ ಹೇಗೆ? ಅಪಾರ ಪಾಂಡಿತ್ಯ, ಪ್ರತಿಭೆಗಳನ್ನು ಹೊರಗೆಡಹು ತ್ತಿದ್ದ ಈ ವಿದ್ಯೆಯನ್ನು ಇಂತಹ ಎಳೆ ವಯಸ್ಸಿನಲ್ಲಿ ದೊರಕಿಸಿಕೊಳ್ಳುವು ದಾದರೂ ಹೇಗೆ ? ಎಂಬ ವಿಚಾರಗಳು ನನ್ನ ತಲೆಯನ್ನು ಆವರಿಸಿದವು. ಮುಂದೆ ಮೂರು ಚೀಸು ಒಂದು ಪದವನ್ನು ವಾಸುದೇವ ನುಡಿಸಿದ. ಜಲಸಾ ಮುಗಿಯುವ ಹೊತ್ತಿಗೆ ವಾಸುದೇವ ತಾಯಿ ಶಾರದೆಯ ವರಪುತ್ರನೆಂಬುದು ನನ್ನ ಮನಸ್ಸಿನಲ್ಲಿ ಬೇರೂರಿತು.

ಮಾರನೆಯ ದಿವಸ ವಾಸುದೇವನ ತಂದೆ ಕನಕಾಪೂರ್ ಅವರು ಅವ ನನ್ನು ನನ್ನ ಕೋಣೆಗೆ ಕರೆದುಕೊಂಡು ಬಂದರು. ಅವನ ವಿಚಾರ ಕೆಲವು ವಿಷಯಗಳನ್ನು ಸಂಗ್ರಹಿಸಲು ನನಗೆ ಅನುಕೂಲವಾಯಿತು. ವಾಸು ದೇವನ ಮುತ್ತಜ್ಜ ಬಾಪೂರಾಯರು ಉತ್ತಮ ವೈಣಿಕರಾಗಿದ್ದರಂತೆ. ಕೀರ್ತಿಶೇಷ ವೈಣಿಕಶಿಖಾಮಣಿ ಶೇಷಣ್ಣನವರ ಗೆಳೆಯರವರು. ವಂಶ ಪಾರಂಪರ್ಯವಾಗಿ ಸಂಗೀತ ಕಲೆ ವಾಸುದೇವನಿಗೇನಾದರೂ ಬಂದಿದ್ದರೆ ಇಲ್ಲಿಂದಲೇ. ಮುಂದೆ ಅವನ ವಂಶದಲ್ಲಿ ಯಾರೂ ಸಂಗೀತಗಾರರಾಗಿರ ಲಿಲ್ಲ. ವಾಸುದೇವನ ತಂಗಿಗೆ ಸಂಗೀತ ಪಾಠವಾಗುತ್ತಿತ್ತು. ಹುಡುಗ ಆಸಕ್ತಿಯಿಂದ ಅದನ್ನು ಕೇಳುತ್ತಿದ್ದ. ಒಂದು ದಿನ ತನಗೂ ಸಂಗೀತ ಹೇಳಿಸೆಂದು ತಂದೆಯನ್ನು ಪೀಡಿಸಿದಾಗ ಅವರು ನಕ್ಕು ಅಲ್ಲೆಗೆಳೆಯಲು ಸಹಜವಾಗಿ ಹಾರ್ಮೋನಿಯಂ ವಾದ್ಯವನ್ನು ತೆಗೆದುಕೊಂಡು ನುಡಿಸಿ ತೋರಿಸಿಬಿಟ್ಟ. ಅವನಲ್ಲಿ ಸುಪ್ತವಾಗಿದ್ದ ಕಲಾಚೇತನವನ್ನು ಕಂಡು ಕನಕಾ ಪೂರ್‌ರವರು ಅದೇ ಶಿಕ್ಷಕನಿಂದಲೇ ಒಂದೂವರೆ ವರ್ಷ ಪಾಠ ಹೇಳಿಸಿ ದರು. ಶಿಷ್ಯನ ಪ್ರಗತಿಯನ್ನು ಕಂಡು ಗುರುಗಳು ತಮ್ಮ ಬಂಡವಾಳ ಬರಿ ದಾದುದನ್ನು ತಿಳಿಸಿ, ಯಾರಾದರೂ ಉತ್ತಮ ವಿದ್ವಾಂಸರಲ್ಲಿ ಮುಂದಕ್ಕೆ

ಪಾಠ ಹೇಳಿಸಿ ಎಂದು ಸೂಚಿಸಿ ಪಾರಾದರು. ಇದೇ ಅಭಿಪ್ರಾಯವನ್ನು ಸವಾಯ್ ಗಂಧರ್ವರ ಗೆಳೆಯರೂ ಪ್ರಸಿದ್ಧ ಕಲಾಭಿಮಾನಿಗಳೂ ವಿಮರ್ಶಕರೂ ಆದರೆ ದತ್ತೋಪಂತ ದೇಸಾಯಿಗಳೂ ಸೂಚಿಸಿದರು. ಆದರೆ ಕನಕಾಪೂರ್‌ರವರ ಆರ್ಥಿಕಸ್ಥಿತಿ ಅದಕ್ಕೆ ಅವಕಾಶ ಕೊಡುವ ಹಾಗಿರಲಿಲ್ಲ. ಹೇಗಾದರೂ ಅಸ್ತಿಭಾರವಾದರೂ ಸರಿಯಾಗಿರಲಿ ಎಂದು ಕನಕ ಸಭಾಪತಿಯೆಂಬ ದಕ್ಷಿಣಾದಿ ಸಂಗೀತ ಶಿಕ್ಷಕರನ್ನು ಗೊತ್ತು ಮಾಡಿದರು. ಅವರಿಂದ ವಾಸುದೇವನಿಗೆ ಎರಡು ಕೀರ್ತನೆ, ನಾಲ್ಕು ವರ್ಣಗಳಷ್ಟು ಪಾಠವಾಯಿತು.

ಈ ವಿದ್ವತ್ವೈಖರಿ ಗುಪ್ತವಾಗಿರಕೂಡದೆಂದು ಹುಬ್ಬಳ್ಳಿಯ ಭಗಿನೀ ಮಂಡಲದ ಶ್ರೀ॥ ಉಮಾಬಾಯಿ ಕುಂದಾಪುರರವರು ಒಂದು ಬೈಟಕ್ ಮಾಡಿಸಿ ಉತ್ತರ ಕರ್ಣಾಟಕದ ಕಲಾಪ್ರೇಮಿಗಳಿಗೆ ವಾಸುದೇವನ ಪರಿಚಯ ಮಾಡಿಕೊಟ್ಟರು. ಮುಂದೆ ಅನೇಕ ಕಡೆ ಬೈಟಕ್ಕುಗಳೂ ಆದವು. ಸಾಂಗ್ಲಿ, ಮುಂಬಯಿ ಫಲ್ಟಾನ್‌ಗಳ ಪ್ರವಾಸ ಆಯಿತು. ಸಾಂಗ್ಲಿ, ಫಲ್ಟಾನ್ ಎರಡು ಸಂಸ್ಥಾನಗಳಲ್ಲಿಯೂ ದರ್ಬಾರಿನಲ್ಲಿ ರಾಜಾ ಸಾಹೇಬರುಗಳ ಮುಂದೆ ಬೈಟಕ್ಕುಗಳಾದವು. ಆಗ ಆಸ್ಥಾನದ ಪ್ರಸಿದ್ಧ ತಬಲಾ ವಿದ್ವಾಂಸರು ವಾಸುದೇವನನ್ನು ಕೆಣಕಿ ನೋಡಿ ವಿಸ್ಮಯಗೊಂಡರು. ಮುಂಬಯಿಯಲ್ಲಿ ಪ್ರಸಿದ್ಧ ಚಿತ್ರಕಲಾಕೋವಿದರಾದ ಶ್ರೀ ಹಾಲ್ದಾನಕರ್ ಅವರು ತಮ್ಮ ಮನೆಯಲ್ಲಿ ಬೈಟಕ್ ಮಾಡಿ ಅನೇಕ ಮಂದಿ ಸಂಗೀತ ವಿದ್ವಾಂಸರನ್ನು ಬರಮಾಡಿಕೊಂಡಿದ್ದರು. ಅವರಲ್ಲಿ ಕೋರಗಾಂವಕರ್ ಅವರೂ ಒಬ್ಬರಾಗಿದ್ದರು. ವಾಸುದೇವನ ಪ್ರತಿಭೆಯನ್ನು ಕಂಡು ಕೋರಗಾಂವಕರ್ ಅವರು ಅವನದೂ ತಮ್ಮದೂ ಒಂದೇ ಸಂಪ್ರದಾಯವೆಂದೂ ವಾಸುದೇವನ ವಿದ್ಯೆ ದೈವದತ್ತವಾದುದೆಂದೂ ಮನವಾರೆ ಕೊಂಡಾಡಿದರು.

ಧಾರವಾಡದಲ್ಲಿ ಮಾಧ್ಯಮಿಕ ಶಾಲಾಬಾಲಕರಿಗೆ ಒಂದು ಸಂಗೀತ ಕಲಾಸ್ಪರ್ಧೆ ಏರ್ಪಾಟಾಯಿತು, ಅದರಲ್ಲಿ ತಾನೂ ನುಡಿಸಬೇಕೆಂದೂ ಇತರ ಬಾಲಕರನ್ನು ಕೇಳಬೇಕೆಂದು ವಾಸುದೇವ ಇಚ್ಛೆ ಪಡಲು ಅವನ ತಂದೆ ಸಂಬಂಧಪಟ್ಟ ಅಧಿಕಾರಿಗಳನ್ನು ಕೇಳಿ 'ಸಾಧ್ಯವಿಲ್ಲ' ಎನ್ನಿಸಿಕೊಂಡು

ಬಂದರು. ವಾಸುದೇವ ಶಾಲಾ ವಿದ್ಯಾರ್ಥಿಯಾಗಿರಲಿಲ್ಲ, ; ಅದೇ ಅವನ 'ಅಪಾತ್ರತೆ'ಯಾಗಿತ್ತು. ಇದನ್ನು ಕೇಳಿದ ಶ್ರೀಮತಿ ಜಮಖಂಡಿ ಅಕ್ಕೂ ಬಾಯಿಯವರು ಡಿಸ್ಟ್ರಿಕ್ಟ್ ಎಜ್ಯುಕೇಷನಲ್ ಇನ್ಸ್ಪೆಕ್ಟರವರಾದ, ಶ್ರೀತಾವಡೆಯವರಿಂದ ಅಪ್ಪಣೆ ಪಡೆದು ವಾಸುದೇವ ಸ್ಪರ್ಧೆಯಲ್ಲಿ ನುಡಿಸಲು ಅವಕಾಶ ಮಾಡಿಕೊಟ್ಟರು. ಶ್ರೀ ತಾವಡೆಯವರು ಅಂದಿನ ವಾದ್ಯ ವಾದನ ನೈಪುಣ್ಯವನ್ನು ಕಂಡು ಒಂದು ವಿಶೇಷ ಬಹುಮಾನವನ್ನು ವಾಸು ದೇವನಿಗೆ ಕೊಟ್ಟರು.

ವಾಸುದೇವನಿಗೆ ಈಗ ಏಳು ವರ್ಷ ತುಂಬುತ್ತ ಬಂದಿದೆ. ಪೂರ್ಯಾ, ಭೀಮಪಲಾಸ್, ಯಮುನ್, ಜೀವನಪುರಿ, ಭೂಪ್, ತಿಲಂಗ, ಭೈರವ, ಭೈರವಿ, ಶಂಕರ, ತಿಲಕ್‌ಕಾಮೋದ್, ಬಹರ್, ಸೋಹನಿ ಅವನ 'ಪ್ರೀತಿ'ಯ ಪಾತ್ರರಾಗಗಳಾಗಿವೆ. ಅವನಿಗೆ ಜಗದಂಬೆಯಲ್ಲಿ ಅಪಾರ ಭಕ್ತಿ ಯಿದೆ. ಬಹಳ ಗಂಭೀರವಾಗಿ ದೊಡ್ಡ ಯೋಗಿಯ ಹಾಗೆ ಜಗನ್ಮಾತೆ ಯನ್ನು ಧ್ಯಾನಿಸುತ್ತಾನೆ. ಹಾರ್ಮೋನಿಯಂ ವಾದ್ಯವಲ್ಲದೆ ಜಲತರಂಗ, ಕಾಷ್ಟಾತರಂತ, ದಿಲ್‌ರುಬಾ ವಾದ್ಯಗಳನ್ನು ನುಡಿಸುತ್ತಾನೆ.

ವಾಸುದೇವ ಬಲು ಮಾತುಗಾರ. ಸ್ವಾರಸ್ಯವಾಗಿ ಹರಟಬಲ್ಲ. ಒಮ್ಮೆ ಗಂಭೀರವಾಗಿ ಘನರಾಗವೊಂದರ ಆರೋಹಣ, ಅವರೋಹಣ, ಸಂಚಾರಗಳನ್ನು ಕುರಿತು ಮಾತನಾಡಿದರೆ ಮತ್ತೊಮ್ಮೆ ಮಗುವಿನಂತೆ ಏನಾದರೂ ಚೇಷ್ಟೆ ಮಾಡುತ್ತಾನೆ. ಅವನಲ್ಲಿ ಜ್ಞಾತಾಜ್ಞಾತಾ ಚೇತನ ಗಳು ಸೆಣಸುತ್ತಿರುತ್ತವೆ. ಅವನ ಕಲಾಜೀವನ ಹಲವು ಜನ್ಮಗಳಿಂದ ಬೆಳೆದು ಬಂದಿರಬೇಕು- ಅದರ ನೆನಪು ಕಲಾಪ್ರಪಂಚದಲ್ಲಿದ್ದ ಅವನಿಗೆ ಬರುತ್ತಿರಬೇಕು. ವಾಸ್ತವಿಕ ಜಗತ್ತಿಗೆ ಬಂದಾಗ ವಾಸುದೇವ ಹಾಲು ಹಸುಳೆ, ಹುಬ್ಬಳ್ಳಿಯ ಕನಕಾಪೂರ್ ಅವರ ಮುದ್ದು ಮಗ.

. ಇದೊಂದು ಕನ್ನಡ ರತ್ನ. ಕನ್ನಡ ಕಲೆಯ ಬೆಳಕು. ಕನ್ನಡ ಜನತೆ ವಾಸುದೇವನ ಕಲಾಸರಸ್ಸಿನಲ್ಲಿ ಮಿಂದು ತಣಿಯಬೇಕು. ಅವನ ವಿದ್ಯೆ ವಿಕಸಿಸಲು ಎಲ್ಲ ರೀತಿಯಲ್ಲಿಯೂ ನೆರವಾಗಬೇಕು.

"ನೀವು ಅವನನ್ನು ಸವಾಯ್ ಗಂಧರ್ವ, ವಿಲಾಯತ್ ಹುಸೇನ್ ಮೊದ ಲಾದ ಯಾರಾದರೂ ಒಬ್ಬ ದೊಡ್ಡ ಕಲಾವಿದರಲ್ಲಿ ನಾಲ್ಕು ವರ್ಷ ಬಿಡಬೇಕು"

ಎಂದು ನಾನು ಹೇಳಿದೆ. ಅದಕ್ಕೆ ವಾಸುದೇವನ ತಂದೆ

"ನನಗೂ ಇಚ್ಛೆಯಿದೆ ಸ್ವಾಮಿ, ನಾನು ಹುಬ್ಬಳ್ಳಿಯ ಮುನಿಸಿಪಾಲಿಟಿಯ ಬಡ ನೌಕರ. ಅದಕ್ಕೆ ಬೇಕಾದ ಅನುಕೂಲ ನನಗಿಲ್ಲ"

ಎಂದು ಬಹಳ ದುಃಖದಿಂದ ತಿಳಿಸಿದರು. ಈ ಅಮೃತದ ಬಳ್ಳಿಗೆ ಹಾಲೆರದು ಯಾರಾದರೂ ಕನ್ನಡ ಶ್ರೀಮಂತರು ರಕ್ಷಿಸಬಾರದೆ ?

ದೀಪಾವಳಿ-೧೯೪೦

———



ಎಸ್. ರಾಮರಾಯ

ಪುಟ ೬೩]

## ೧೦. ಆಸ್ಥಾನವಿದ್ವಾನ್ ಎಸ್. ರಾಮರಾಯರು

ಮುಂಬಯಿಯಲ್ಲಿ ಒಬ್ಬ ಪ್ರಸಿದ್ಧ ಕನ್ನಡ ಸಂಗೀತ ವಿದ್ವಾಂಸರ ಕಛೇರಿ ಮುಗಿಸಿಕೊಂಡು ಒಬ್ಬ ಗೆಳೆಯರೂ ನಾನೂ ಮನೆಗೆ ಹಿಂದಿರುಗುತ್ತಿದ್ದೆವು. ಹರಟೆ ಸಹಜವಾಗಿ ಕರ್ನಾಟಕ—ಹಿಂದುಸ್ಥಾನೀ ಸಂಗೀತ, ಸಂಗೀತಗಾರರ ಕಡೆಗೆ ಹೊರಳಿತು. ಕರ್ನಾಟಕದ ಒಬ್ಬೊಬ್ಬ ವಿದ್ವಾಂಸರನ್ನು ಹಿಂದೂಸ್ಥಾನಿಯ ಒಬ್ಬೊಬ್ಬ ವಿದ್ವಾಂಸರಿಗೆ ಹೋಲಿಸುತ್ತ ಬಂದೆವು.

" ಚಿಕ್ಕರಾಮರಾಯರು " ಎಂದು ಗೆಳೆಯರಂದರು.

" ವಝೆ ಬೂವಾ ಅವರಿಗೆ ಹೋಲಿಸಬಹುದು."

ಎಂದು ನಾನಂದೆ. ಅದು ಹರಟೆಗಾಗಿ ಲಘುವಾಗಿ ಆಡಿದ ಮಾತಲ್ಲ. ಇಬ್ಬರದೂ ಒಂದೇ ತೂಕ, ಒಂದೇ ಗಾಂಭೀರ್ಯ, ಒಂದೇ ಬಗೆಯ ಸಂಗ್ರಹ ಹಾಗೂ ವೈವಿಧ್ಯ. ಒಬ್ಬರು ಹಿಂದೂಸ್ಥಾನಿ ಸಂಗೀತಕ್ಕೆ ರತ್ನಪ್ರಾಯರು ; ಇನ್ನೊಬ್ಬರು ಕರ್ನಾಟದ ಸಂಗೀತಕ್ಕೆ ಕಳಶಪ್ರಾಯರು.

ಮೈಸೂರಿನಲ್ಲಿ ಎಲ್ಲಾ ಸಂಗೀತಗಾರರ ವಿಚಾರವಾಗಿಯೂ ಸಲಿಗೆಯಿಂದ ಮಾತನಾಡುವವರು ಕೂಡ ಚಿಕ್ಕರಾಮರಾಯರೆಂದರೆ ಸ್ವಲ್ಪ ಗಂಭೀರವಾಗಿಯೇ ಮಾತನಾಡುತ್ತಾರೆ. ಸಂಗೀತ ವಿದ್ವಾಂಸರುಗಳಿಗೆ ತರಗತಿಗಳನ್ನೇರ್ಪಡಿಸುವವರು ಕೂಡ ರಾಮರಾಯರನ್ನು ಒಂದು ಸ್ವತಂತ್ರ ತರಗತಿಗೆ ಸೇರಿಸುತ್ತಾರೆ.

ಹನ್ನೊಂದನೆಯ ವಯಸ್ಸಿನಲ್ಲಿ ಪಲ್ಲವಿ ಹಾಡುವ ಪ್ರತಿಭೆ ; ಹದಿನೈದನೆಯ ವಯಸ್ಸಿನಲ್ಲಿ ವೈಣಿಕ ಶಿಖಾಮಣಿ ಶೇಷಣ್ಣನವರ ಅಧ್ಯಕ್ಷತೆಯಲ್ಲಿ

ಪುರಜನರಿಂದ ಪುರಸ್ಕಾರ; ಹದಿನೇಳನೆಯ ವಯಸ್ಸಿನಲ್ಲಿ ಮುಂಬಯಿಯಲ್ಲಿ ಕರ್ನಾಟಕ ಸಂಗೀತ ಧ್ವಜವನ್ನೇರಿಸಿದ ಪ್ರತಿಭಾಶಾಲಿಯನ್ನು ಭಯಭಕ್ತಿಯಿಂದಲೇ ಸಂಬೋಧಿಸಬೇಕಾಗುತ್ತದೆ.

"ಕಲೆ ಎಲ್ಲರನ್ನೂ ಕರೆಯುತ್ತದೆ. ಆದರೆ ಕೆಲವರನ್ನು ಮಾತ್ರ ಆರಿಸುತ್ತದೆ" ಎಂಬುದೊಂದು ಹಿರಿಮಾತು. ಕಲಾಭಿಮಾನಿ ದೇವತೆ ಬಾಲ್ಯದಿಂದಲೂ ರಾಮರಾಯರನ್ನು ತನ್ನ ಸೇವೆಗೆ ನಿರ್ದೇಶಿಸಿದ್ದಳೆಂಬುದರಲ್ಲಿ ಸಂದೇಹವೇ ಇಲ್ಲ.

ಬಾಲ್ಯದಲ್ಲಿಯೇ ತಂದೆ ತಾಯಿಗಳನ್ನು ಕಳೆದುಕೊಂಡ ರಾಯರನ್ನು ಅವರ ತಾಯಿಯ ತಂದೆ ಪೋಷಿಸಿದರು. ಅವರು ವಿದ್ಯಾವಂತರೂ ಸಂಸ್ಕೃತರೂ ಆಗಿದ್ದುದರಿಂದ ರಾಯರ ಸುಪ್ತಚೇತನ ಜಾಗೃತವಾಗಲು ಇಂಬು ದೊರಕಿತು. ರಾಯರು ದೇವರ ನಾಮಗಳನ್ನು ತಮ್ಮ ಸುಮಧುರ ಕಂಠದಿಂದ ಬಹಳ ಇಂಪಾಗಿ ಹಾಡುತ್ತಿದ್ದರು. ಅವನ್ನು ಕೇಳಿದ್ದ ಅರಮನೆಯ ವಿದ್ವಾಂಸರಾದ ಗಿರಿಭಟ್ಟರ ತಮ್ಮಯ್ಯನವರು ಒಂದು ದಿನ ಮಹಾರಾಜರವರಲ್ಲಿ ಬಾಲಕನ ವಿಚಾರ ನಿವೇದಿಸಿದರು. ಮಹಾಸ್ವಾಮಿಯವರು ಸಂತೋಷಪಟ್ಟು ಅರಮನೆಯ ಪೋಷಣೆಯಲ್ಲಿದ್ದ ಶಾಕುಂತಲ ನಾಟಕ ಕಂಪೆನಿಯ ಕಿರಿಯ ಸದಸ್ಯರ ಜತೆಗೆ ಸೇರಿಸುವಂತೆ ಅಪ್ಪಣೆ ಮಾಡಿದ್ದರು. ರಾಯರಿಗೆ ಪ್ರಿಯವಾದ ಸಂಗೀತ, ಅಭಿನಯ ವಿದ್ಯಾಭ್ಯಾಸವಾರಂಭವಾಯಿತು. ಅವರ ಪುಷ್ಟಚೇತನ ಹೆಚ್ಚು ಬೇಡಿತು. ಹಿತೈಷಿಗಳ ಕೃಪೆಯಿಂದ ಆಸ್ಥಾನ ವಿದ್ವಾಂಸರಾಗಿದ್ದ ಸಂಗೀತ ವಿದ್ಯಾ ಕಂಠೀರವ ಕರಿಗಿರಿರಾಯರ ಶಿಷ್ಯತ್ವ ಲಭಿಸಿತು. ಕರಿಗಿರಿರಾಯರು ಶಿಷ್ಯನಿಗೆ ಹೇಳಿಕೊಡಬೇಕಾದ ಭಾಗ ಬಹಳ ಕಡಿಮೆಯೆಂಬುದನ್ನು ಕ್ಷಿಪ್ರವಾಗಿ ಅರಿತು, ಯೋಗ್ಯ ವಿದ್ಯಾಸಂಗ್ರಹಕ್ಕೆ ಬೇಕಾದ ಅನುಭವವನ್ನು ದೊರಕಿಸಲು ನೆರವಾದರು.

ಆಗ ಅರಮನೆಯಲ್ಲಿ ಚಿತ್ರಗೆಲಸವನ್ನು ಕೈಗೊಂಡಿದ್ದ ರಾಜಾ ರವಿವರ್ಮನಿಗೆ ರಾಯರ ಸಂಗೀತವನ್ನೊಮ್ಮೆ ಕೇಳುವ ಸುಯೋಗ ದೊರೆಯಿತು. ರವಿವರ್ಮನಿಗೆ ಚಿತ್ರರಚನಾ ಕಾಲದಲ್ಲಿ ಸಂಗೀತದ ನೆರವು ಬೇಕಾಗಿತ್ತು. ತನಗೆ ಒಬ್ಬ ಸಂಗೀತಗಾರರ ಸಹಕಾರಬೇಕೆಂದು ಮಹಾರಾಜರವರಲ್ಲಿ ಬಿನ್ನವಿಸಿಕೊಂಡ.

"ನಿಮಗೆ ಯಾರು ಬೇಕು ?" ಎಂದು ಮಹಾಸ್ವಾಮಿಯವರು ಕೇಳಿದರು. ಆಗ ರವಿವರ್ಮ ರಾಯರ ಚಿತ್ರವನ್ನು ಬರೆದು ತೋರಿಸಿದ. ಮಹಾಸ್ವಾಮಿಯವರು ಸಂತೋಷದಿಂದ "ಅವನೇ, ನಮ್ಮ ಚಿಕ್ಕರಾಮು" ಎಂದರು. ಅಂದಿನಿಂದ ರಾಮರಾಯರಿಗೆ ಚಿಕ್ಕರಾಮು ಎಂಬ ಅನ್ವರ್ಥ ನಾಮ ಸ್ಥಿರವಾಯಿತು. ಚಿಕ್ಕರಾಮು ಚಿಕ್ಕವನಾಗಿದ್ದರೂ ಮಹಾಸ್ವಾಮಿಯವರು ಅವನ ಪ್ರತಿಭೆಗೆ ಮನಸೋತು ಅರಮನೆಯ ಸಂಗೀತ ವಿದ್ವಾಂಸರಲ್ಲಿ ಸ್ಥಾನವಿತ್ತರು.

ರಾಮರಾಯರ ವಿದ್ಯೆ ಫಲಿಸಲು ಅವರ ಗುರುಲಾಭ ಪುಣ್ಯವೇ ಮುಖ್ಯ ಕಾರಣವಾಗಿತ್ತು. ಶಿಷ್ಯನನ್ನು ಅರಸಿ, ಒಲಿದು ಗುರುಗಳು ತಮ್ಮ ವಿದ್ಯಾಸಂಪತ್ತನ್ನು ಧಾರೆಯೆರೆದರೆ ಇಬ್ಬರೂ ಧನ್ಯರು. ವೀಣೆ ಸುಬ್ಬಣ್ಣನವರ ಗುರುತ್ವವೂ ರಾಮರಾಯರಿಗೆ ಅವರ ಯೋಗ್ಯತೆಯ ಬಲದಿಂದಲೇ ಲಭಿಸಿತು. ಸುಬ್ಬಣ್ಣನವರು ಪ್ರತಿ ಶನಿವಾರ ತಮ್ಮ ಮನೆಯಲ್ಲಿ ಭಜನೆ ಮಾಡುವ ಪರಿಪಾಠವನ್ನಿಟ್ಟುಕೊಂಡಿದ್ದರು. ಒಂದು ದಿನ ಭಜನೆಗೆ ಹೋಗಿದ್ದ ರಾಯರಿಗೆ ಸುಬ್ಬಣ್ಣನವರು ಹಾಡಲು ಹೇಳಿದರು. ಅವರಲ್ಲಿದ್ದ ಸುಪ್ತ ಪ್ರತಿಭೆ ಪೂರ್ಣವಿಕಾಸವನ್ನು ಪಡೆಯುವಂತೆ ಮಾಡುವುದು ತಮ್ಮ ಕರ್ತವ್ಯವೆಂದು ಸುಬ್ಬಣ್ಣನವರು ಭಾವಿಸಿ ರಾಯರನ್ನು ಶಿಷ್ಯರನ್ನಾಗಿ ಪರಿಗ್ರಹಿಸಿದರು. ಶಿಷ್ಯನನ್ನು ಹಾಡಿಸಿ ತಿದ್ದಿ ಅವನೆದುರಿಗೆ ತಾವು ವೀಣೆಯನ್ನು ನುಡಿಸಿ ರಾಯರ ಹೃದಯದಲ್ಲಿ ವಿದ್ಯಾದೇವಿ ತನ್ನ ವೀಣೆಯನ್ನು ನುಡಿಸುವಂತೆ ಮಾಡಿದರು. ವಿವಿಧ ಸಂಪ್ರದಾಯಗಳ (ಘರಾಣೆಗಳ) ಸಂಗೀತ ವಿದ್ಯಾಪರಿಚಯವಾಗಲೆಂದು ಸುಬ್ಬಣ್ಣವರು ಪ್ರಸಿದ್ಧ ಸಂಗೀತ ವಿದ್ವಾಂಸರಾದ ತಿರುವಾಯೂರು ಸುಬ್ರಹ್ಮಣ್ಯ ಅಯ್ಯರವರನ್ನು ಆಹ್ವಾನಿಸಿ ಅವರನ್ನು ಎರಡು ವರ್ಷ ಕಾಲ ತಮ್ಮ ಮನೆಯಲ್ಲಿಟ್ಟುಕೊಂಡು ಸತ್ಕರಿಸಿ ರಾಮರಾಯರಿಗೆ ಅಯ್ಯರವರ ಅಪಾರವಿದ್ಯೆಯ ಲಾಭ ದೊರೆಯುವಂತೆ ಮಾಡಿದರು. ರಾಯರ ಪಲ್ಲವಿ ವಿದ್ಯೆ ಪರಿಪಕ್ವವಾಗಲು ಈ ಉಪಕಾರ ತುಂಬ ಸಹಾಯ ಮಾಡಿತು.

ರಾಯರಿಗೆ ಹದಿನೇಳನೆಯ ವರ್ಷ ನಡೆಯುತ್ತಿತ್ತು. ಆಗ ಮುಂಬಯಿ ನಗರದಲ್ಲಿ ದೊಡ್ಡ ಸಂಗೀತ ಪರಿಷತ್ತು. ಕರ್ನಾಟಕ ಸಂಗೀತದ ರಾಯ

ಭಾರಿಯಾಗಿ ಹೋಗುವ ಗೌರವ ರಾಯರಿಗೆ ಲಭಿಸಿತು. ಗಂಧರ್ವ ವಿದ್ಯಾಲಯದ ಸ್ಥಾಪಕರಾದ ವಿಷ್ಣು ದಿಗಂಬರರವರು, ಭಾಸ್ಕರ ಬೂವಾ ಅವರು, ಖಾನ್‌ಸಾಹೇಬ್ ಅಬ್ದುಲ್ ಕರೀಂಖಾನರು ರಾಯರ ಸಂಗೀತ ಕೇಳಿ ಸಂತೋಷಿಸಿ, ಅವರಿಗೆ "ಪಂಡಿತ" ಪ್ರಶಸ್ತಿಯನ್ನೂ ಚಿನ್ನದ ಹಾರವನ್ನೂ ಕಾಣಿಕೆಯಾಗಿ ಅರ್ಪಿಸಿದರು. ವಿಷ್ಣು ದಿಗಂಬರರವರು ರಾಯರ ಬಗ್ಗೆ "ಈ ಶಾಸ್ತ್ರನೈಪುಣ್ಯವಿರುವವರು ಜಗತ್ತಿನ ಯಾವ ಸಂಗೀತವನ್ನಾದರೂ ಘನವಾಗಿ ಹಾಡಲು ಸಮರ್ಥರಾಗಿದ್ದಾರೆ." ಎಂದು ಹೇಳಿದ ಮಾತು ಅವರ ದಿಗ್ವಿಜಯದ ಕೀರ್ತಿಪತಾಕೆಯಾಗಿದೆ.

ಸುಬ್ಬಣ್ಣನವರು ರಾಯರಲ್ಲಿ ಪುತ್ರವಾತ್ಸಲ್ಯವನ್ನಿಟ್ಟುಕೊಂಡಿದ್ದರು. ರಾಯರಿಗೆ ಹದಿನೆಂಟನೆಯ ವಯಸ್ಸಿನಲ್ಲಿ ಶಾರೀರ ಒಡೆದಾಗ ಸುಬ್ಬಣ್ಣನವರು ಅವರನ್ನು ಮನೆಯಲ್ಲಿಯೇ ಇಟ್ಟುಕೊಂಡು ಪೋಷಿಸಿ ಶಾರೀರಕ್ಕೆ ತಕ್ಕ ಪೋಷಣೆಯನ್ನಿತ್ತರು. ಇಂದು ರಾಯರಿಗಿರುವ ಗಂಡು ಶಾರೀರ ಸುಬ್ಬಣ್ಣನವರ ಸಕಾಲ ಪೋಷಣೆಯ ಫಲ.

ರಾಯರು ವಿಶಾಲ ಪ್ರಪಂಚದ ರಂಗಭೂಮಿಗೆ ಧುಮ್ಮಿಕ್ಕಿದರು. ನಾಟಕದಲ್ಲಿ ಪಾತ್ರವಹಿಸುವ ಯಾವನೊ ಸಾಮಾನ್ಯ ಹುಡುಗನೆಂದು ಅವಹೇಳನ ಮಾಡಿದ ಬೆಂಗಳೂರು ಸಂಗೀತ ವಿದ್ವಾಂಸರ ಅಹಂಕಾರಕ್ಕೆ ರಾಯರ ಸಂಗೀತ ಒಂದು ಸಂದರ್ಭದಲ್ಲಿ ಯೋಗ್ಯ ಚಿಕಿತ್ಸೆ ಮಾಡಿತು. ಒಮ್ಮೆ ರಾಯರು ಕಛೇರಿಯ ಸಲುವಾಗಿ ದೊಡ್ಡಬಳ್ಳಾಪುರಕ್ಕೆ ಹೋಗಿದ್ದಾಗ ಅಲ್ಲಿನ ಒಬ್ಬ ವಿದ್ವಾಂಸರಿಗೆ ರಾಯರನ್ನು ಪರೀಕ್ಷಿಸುವ ಚಾಪಲ್ಯ ಹುಟ್ಟಿತು. ಕೆಲವು ಕೀರ್ತನೆಗಳ ಒಂದು ಪಟ್ಟಿಯನ್ನು ಸಿದ್ಧಮಾಡಿ ರಾಯರ ಕೈಗಿಟ್ಟು " ಇವುಗಳನ್ನು ಹಾಡಿ " ಎಂದರು. ಅವುಗಳಲ್ಲಿ ರಾಯರಿಗೆ ಪರಿಚಯವಿದ್ದದ್ದು ಎರಡೇ ಕೀರ್ತನೆಗಳು. ರಾಯರು ಆಗಲೆಂದು ಒಪ್ಪಿ ಮೊದಲನೆಯ ಕೀರ್ತನೆಯನ್ನು ಮೂರು ಗಂಟೆಗಳ ಕಾಲ ಹಾಡಿದರು. ಪರೀಕ್ಷಕರಿಗೆ ವೇಳೆಯೂ ತಿಳಿಯಲಿಲ್ಲ, ಮಿಕ್ಕ ಕೀರ್ತನೆಗಳನ್ನು ಕೇಳಬೇಕೆಂಬ ಆಸೆಯೂ ಉಳಿಯಲಿಲ್ಲ. ವಿದ್ವಾಂಸರು ರಾಯರನ್ನು ಮೆಚ್ಚಿಕೊಂಡು " ಇದೇ ರಸಸಂಗೀತ " ಎಂದರು.

ತಮ್ಮ ಗುರುಗಳ ಜತೆಯಲ್ಲಿ ರಾಯರು ಮದರಾಸಿಗೆ ಹೋಗಿಬಂದು ಅಲ್ಲಿ ಸಾರ್ವತ್ರಿಕವಾಗಿ ವ್ಯಾಪಿಸಿದ್ದ ದಕ್ಷಿಣ ಸಂಗೀತ ವಿದ್ವಾಂಸರ ಅಹಂ ಭಾವಕ್ಕೆ ತಕ್ಕ ಪ್ರತೀಕಾರವನ್ನು ಮಾಡಿ ಕರ್ನಾಟಕದ ಹೆಚ್ಚಳವನ್ನು ಸಾರಿ ಬಂದರು. ಸುಬ್ಬಣ್ಣನವರು ಕೆಲವು ಕಾಲ ಮದರಾಸಿನಲ್ಲಿಯೇ ನಿಂತು ಪ್ರಸಿದ್ಧ ವಿದ್ವಾಂಸರಾದ ಅನಂತರಾಮ ಭಾಗವತರು, ರಾಮನಾಡ್ ಶ್ರೀನಿವಾಸ ಅಯ್ಯಂಗಾರ್ಯರು ಮತ್ತು ಪಿಟೀಲುವಾದ್ಯವಾದನಕೋವಿದರಾದ ತಿರುಕೊಡಿಕಾವಲ್ ಕೃಷ್ಣ ಅಯ್ಯರವರಿಂದ ಪಾಠ ಹೇಳಿಸಿ ಶಿಷ್ಯನ ಭಂಡಾರ ತುಂಬುವಂತೆ ಮಾಡಿದರು.

೧೯೨೬ ರಲ್ಲಿ ರಾಯರು ಚಿದಂಬರಕ್ಕೆ ಹೋಗಿ ಅಲ್ಲಿನ ವಿಶ್ವವಿದ್ಯಾನಿಲಯದ ಪಂಡಿತರ ಮುಂದೆ ಹಾಡಬೇಕಾಗಿತ್ತು. ಕಾರಣಾಂತರಗಳಿಂದ ರಾಯರಿಗೆ ಪಕ್ಕವಾದ್ಯಗಾರರೇ ದೊರೆಯಲಿಲ್ಲ. ಬರೀ ತಂಬೂರಿಯ ಶ್ರುತಿಯಲ್ಲಿ ಐದು ಗಂಟೆಗಳಕಾಲ ಹಾಡಿದರು. ಕಾಲೇಜಿನ ಪ್ರಿನ್ಸಿಪಾಲರಾದ ಥೋಪ್ ಸಾಹೇಬರು ಚಿತ್ರದ ಗೊಂಬೆಯಂತೆ ಕುಳಿತಿದ್ದರು. ಕಛೇರಿ ಮುಗಿಯಲು ಸಭಾಧ್ಯಕ್ಷರಾದ ಸಭೇಶ ಅಯ್ಯರವರು "ಇಂದು ಗೋಕುಲಾಷ್ಟಮಿ. ರಾಯರಲ್ಲಿ ಶ್ರೀಕೃಷ್ಣನೇ ನೆಲಸಿ ತನ್ನ ದಿವ್ಯಗಾನ ಸುಧೆಯಿಂದ ನಮ್ಮನ್ನು ತಣಿಸಿದ್ದಾನೆ" ಎಂದು ಹೇಳಿದರು. ಸಂಗೀತದ ನೆಲೆವೀಡುಗಳಲ್ಲಿ ಒಂದಾದ ಚಿದಂಬರದಲ್ಲಿ ಹೊರಟ ಈ ಉದ್ಗಾರ ರಾಯರ ಕೀರ್ತಿ ಕಳಶಕ್ಕೆ ಮುತ್ತಿನ ಕುಂದಣವಿಕ್ಕಿದಂತಾಯಿತು.

ಗಾನಕೇಸರಿ ಬಿಡಾರದ ಕೃಷ್ಣಪ್ಪನವರಲ್ಲಿ ಒಂದು ಸಲ ರಾಯರ ಕಛೇರಿಯಾಯಿತು. ಆರಂಭದಲ್ಲಿಯೇ ಆದಿತಾಳದ ವರ್ಣ. ನೆರೆದಿದ್ದ ವಿದ್ವಾಂಸರು ತಾಳಕ್ಕೆ ಹುಡುಕುತ್ತ ಕಣ್ಣು ಕಣ್ಣು ಬಿಟ್ಟರು. ಕೃಷ್ಣಪ್ಪನವರು ತರುಣ ವಿದ್ವಾಂಸರನ್ನು ಮೆಚ್ಚಿಕೊಂಡು "ನಮ್ಮನಂತರ ದೊಡ್ಡ ಸಂಗೀತವೇ ಹೋಗಿ ಬಿಡುತ್ತದೆಂದು ಭಾವಿಸಿದ್ದೆವು. ನಿಮ್ಮಂತಹ ತರುಣರಿರುವವರೆಗೆ ಆ ಭಯವಿಲ್ಲವಾಗಿದೆ" ಎಂದು ಹೇಳಿದರು.

ತಂಜಾವೂರಿಗೆ ರಾಯರು ೧೯೩೧ ರಲ್ಲಿ ತ್ಯಾಗರಾಜರ ಜಯಂತ್ಯುತ್ಸವಕ್ಕೆ ಆಹ್ವಾನಿತರಾಗಿ ಹೋಗಿದ್ದರು. ದೊಡ್ಡ ವಿದ್ವಾಂಸರು ಕೂಡ ಹತ್ತು ನಿಮಿಷಗಳಲ್ಲಿ ತಮ್ಮ ಸೇವೆಯನ್ನು ಮುಗಿಸಬೇಕಾಗಿತ್ತು. ನಾಲ್ಕೂವರೆ

ಗಂಟೆಕಾಲ ಶ್ರೋತೃವರ್ಗ ರಾಯರ ಗಾನಸುಧಾರಸವನ್ನು ಸವಿಯಿತು. ಮುಗಿದಾಗ ಹನ್ನೊಂದು ಗಂಟೆ. ಅಭಿನವ ತ್ಯಾಗರಾಜರನ್ನು ಕಂಡೆವೆಂದು ಸಭೆ ಹರ್ಷಿಸಿತು.

ರಾಯರ ಜೀವನದಲ್ಲಿ ಬಹಳ ದುಃಖದ ಪ್ರಸಂಗವೊಂದು ಕಾರ್ಮೋಡದಂತೆ ಕವಿಯುತ್ತ ಬರುತ್ತಿತ್ತು. ೧೯೩೭ ರಲ್ಲಿ ರಾಯರ ಮನೆಯಲ್ಲಿ ನಡೆದ ರಾಮೋತ್ಸವಕ್ಕೆ ಅವರ ಗುರುಗಳು ದಯೆಮಾಡಿಸಿದ್ದರು. ಶಿಷ್ಯನಿಂದ "ಮಂಚ ಬಾರದು, ಮಡದಿ ಬಾರಳು" ಎಂಬ ಕೀರ್ತನೆಯನ್ನು ಹಾಡಿಸಿ ಕೇಳಿ ಆನಂದತುಂದಿಲರಾಗಿ "ಪ್ರಾಯಶಃ ಹೀಗೆ ನಾನು ನೋಡುವುದು ಇದೇ ಕೊನೆಯ ರಾಮೋತ್ಸವ ರಾಮು" ಎಂದರು. ಮಾರನೆಯ ವರ್ಷದ ರಾಮೋತ್ಸವದಲ್ಲಿ ಸುಬ್ಬಣ್ಣನವರು ಹಾಸಿಗೆ ಹಿಡಿದು ಮಲಗಿಬಿಟ್ಟಿದ್ದರು. ಶಿಷ್ಯನ ಬಾಯಲ್ಲಿ ಪುರಂದರದಾಸರ ಕೀರ್ತನೆಗಳು ಕೆಲವನ್ನು ಹಾಡಿಸಿ ಕೇಳಿ,

"ನಿನಗೆ ನಾನು ಗುರುವಾಗಿ ಕೊಡಬೇಕಾದುದೆಲ್ಲವನ್ನು ಕೊಟ್ಟಿದ್ದೇನೆ. ನಮ್ಮ ಗುರು-ಶಿಷ್ಯ ಬಾಂಧವ್ಯ ಹೀಗೇ ಜನ್ಮಜನ್ಮಾಂತರಗಳಲ್ಲಿಯೂ ಇರಲಿ"

ಎಂದು ಮೈದಡವಿ ಹರಸಿದರು. ಅದೇ ಅವರ ಕೊನೆಯಾಯಿತು. ರಾಯರು ಅನಾಥರಾದರು. ಸುಬ್ಬಣ್ಣನವರ ಹೆಸರು ಎತ್ತಿದರೆ ಸಾಕು, ಇಂದಿಗೂ ರಾಯರ ಕಣ್ಣಲ್ಲಿ ಭಕ್ತಿ, ಪ್ರೇಮ, ಕೃತಜ್ಞತೆಗಳ ತ್ರಿವೇಣೀ ಸಂಗಮವೇ ಹೊರಡುತ್ತದೆ.

ರಾಯರು ಕರ್ನಾಟಕ ಸಂಗೀತ ವಿದ್ವಾಂಸರಲ್ಲಿ ಬಹಳ ಹಿರಿಯ ಸ್ಥಾನವನ್ನು ಪಡೆದುಕೊಂಡಿದ್ದಾರೆ. ಇವರ ರಾಗವಿಸ್ತಾರ, ತಾಳನಿಯೋಜನೆ, ಶ್ರುತಿಪ್ರಾಧಾನ್ಯ ಅಸಮಾನ್ಯ ವ್ಯಕ್ತಿತ್ವವನ್ನು ತೋರುತ್ತವೆ. ಒಮ್ಮೆ ಕೇಳಿದರೆ ಮರೆಯಲಾಗದಂತಹ ಗಂಡು ಶಾರೀರ, ಸಶಕ್ತ ಸಂಗೀತ, ಚಿತ್ತವನ್ನು ಮುತ್ತಿಬಿಡುವ ಸ್ವರ-ತಾನಗಳ ಲಾಸ್ಯ. ರಾಯರ ಗಾನ ಪರ್ವತಧಾರೆಯಂತೆ ಗಹನವೂ ಗಭೀರವೂ ಆದುದು. ಅದರ ವೈಖರಿ ರಾಜವೈಖರಿ.

ದಕ್ಷಿಣಾದಿ ಸಂಗೀತದಲ್ಲಿ ಅನೇಕ ಸಂಪ್ರದಾಯಗಳ (ಘರಾಣೆಗಳ) ಪರಿಚಯವಿರುವುದರಿಂದ ರಾಯರ ಸಂಗ್ರಹ ಅಪಾರವಾದುದು. ಬೇಕಾದ ರಾಗವನ್ನು ಹಾಡುವ ಪ್ರಾವೀಣ್ಯವಲ್ಲದೆ ಬೇಕಾದ ರಾಗವನ್ನು ಸೃಷ್ಟಿಮಾಡುವ

ನಿಷ್ಣಾತತೆಯೂ ಇವರಲ್ಲಿ ಇದೆ. ಶಾಸ್ತ್ರಭಾಗದಲ್ಲಿಯಾಗಲಿ, ಕಲಾಭಾಗದಲ್ಲಿಯಾಗಲಿ ಅಧಿಕಾರವಾಣಿಯಿಂದ ತಮ್ಮ ಅಭಿಪ್ರಾಯವನ್ನು ಮಂಡಿಸಬಲ್ಲ ಸಾಮರ್ಥ್ಯವಿದೆ, ಅದಕ್ಕನುಗುಣವಾದ ವಿದ್ವತ್ತಿನ ಕೆಚ್ಚೂ ಇದೆ. ರಾಯರಿಗೆ ಕರ್ನಾಟಕ ಸಂಗೀತವೇ ಅಲ್ಲದೆ ಹಿಂದೂಸ್ಥಾನಿ ಪದ್ಧತಿ ಸಾಕಷ್ಟು ಗೊತ್ತಿದೆ. ಚೀಜುಗಳನ್ನು ಗವಯ್‌ಗಳಂತೆ ಹಾಡಲು ರಾಯರು ಬಲ್ಲವರಾಗಿದ್ದಾರೆ.

ರಾಯರು ಕರ್ನಾಟಕದ ಉತ್ಕಟ ಅಭಿಮಾನಿಗಳಾಗಿದ್ದಾರೆ. ವಿಜಯನಗರ ಸ್ಮಾರಕೋತ್ಸವದಲ್ಲಿ ಇವರು ಹಾಡಿದ ಕನ್ನಡ ಕೀರ್ತನೆಗಳು ಇಂದಿಗೂ ಶ್ರಾವಕರ ಕಿವಿಗಳಲ್ಲಿ ಪ್ರತಿಧ್ವನಿಸುತ್ತಿವೆ. ಕನ್ನಡ ದೇವರನಾಮ, ಕೀರ್ತನೆಗಳನ್ನು ರಾಯರು ಒಂದು ವೈಶಿಷ್ಟ್ಯದಿಂದ ಹಾಡುತ್ತಾರೆ. ಮೇಳಕರ್ತ ರಾಗಗಳೆಲ್ಲವುಗಳಿಗೂ ಲಕ್ಷ್ಯ-ಲಕ್ಷಣಯುತವಾದ ಕೀರ್ತನೆಗಳನ್ನು ಕನ್ನಡದಲ್ಲಿ ರಚಿಸಿ ಕನ್ನಡ ಸಂಗೀತಕ್ಕೆ ಮಹೋಪಕಾರಮಾಡಿದ್ದಾರೆ. ಅನೇಕ ವರ್ಣಗಳನ್ನೂ ಜನ್ಯರಾಗಗಳಲ್ಲಿ ಕೀರ್ತನೆಗಳನ್ನೂ ರಚಿಸಿದ್ದಾರೆ. ಅವು ಬೇಗ ಬೆಳಕು ಕಂಡು ಕನ್ನಡಿಗರ ಕಲಾಪ್ರತಿಭೆಯನ್ನು ಬಿತ್ತರಿಸಬೇಕು. ರಾಯರು ಕೆಲವು ವರ್ಷಗಳ ಹಿಂದೆ ಓಡಿಯನ್ ಕಂಪೆನಿಯಲ್ಲಿತ್ತ ಗ್ರಾಮಫೋನ್ ರಿಕಾರ್ಡುಗಳು ಅವರ ವಿದ್ವತ್ತಿನ ಒಂದ ಅಂಶವನ್ನಾದರೂ ಸೂಚಿಸುತ್ತವೆ. ಅಂತಹ ಸಂಕ್ಷಿಪ್ತಕಾಲಾವಧಿಯಲ್ಲಿ ರಾಗರಸಯುಕ್ತವಾದ ಒಂದು ಕೀರ್ತನೆಯ ಸಂಪೂರ್ಣ ಭಾವವನ್ನು ವಿಸ್ತರಿಸುವ ಶಕ್ತಿ ಅನುಪಮವಾದುದು.

ಚಿಕ್ಕ ರಾಮರಾಯರು ಸಂಗೀತ ಕಲೆಯಲ್ಲಿ ದೊಡ್ಡವರು; ಶಾಸ್ತ್ರದಲ್ಲಿ ನಿಪುಣರು. ಶಿಷ್ಯರಿಗೆ ಧಾರಾಳವಾಗಿ ಹೇಳುಕೊಡುವ ಬುದ್ಧಿ, ಹೊಸ ಹೊಸ ಅಂಶಗಳನ್ನು ಕಲೆಯಲ್ಲಿ ಶೋಧಿಸುವ ಪ್ರಾಯೋಗಿಕ ಮನೋಭಾವ –ಈ ಎಲ್ಲ ಗುಣಗಳಿಂದ ಹಿಂದೂಸ್ಥಾನದ ಕಲಾವಿದರ ಪಂಕ್ತಿಯಲ್ಲಿ ರಾಯರು ಹಿರಿಯ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಇವರು ಕನ್ನಡಿಗರೆಂದು ಮೇಲೆ ನಮ್ಮ ಹೆಮ್ಮೆಗೆ ಅಡ್ಡಿಯೇನುಂಟು!

**ತರುವಾಯ**

ಕಳೆದ ವರ್ಷ ಶ್ರೀಯುತರು ವೈಕುಂಠವಾಸಿಗಳಾದರು. ಇವರ ನಿಧನದಿಂದ ಸಂಗೀತ ಪ್ರಪಂಚಕ್ಕೆ ಆಗಿರುವ ನಷ್ಟ ವರ್ಣನಾತೀತ. ಶ್ರೀಯುತರ ಶಿಷ್ಯರು ಅವರ ಪರಂಪರೆಯನ್ನು ಕಾಪಾಡಿಕೊಂಡುಬಂದು ಅವರ ಹೆಸರು ಅಚ್ಚಳಿಯದಂತೆ ಉಳಿಸಲೆಂದು ನಮ್ಮ ಹಾರೈಕೆ.

೧-೪-೪೬

———

# ೧೧. ಗಾಯನಾಚಾರ್ಯ ರಾಮಕೃಷ್ಣ ಬೂವಾ ವಝೆ

ವಿಚಾರಶೀಲರಾದ ರಸಿಕರು ಸಂಗೀತದಲ್ಲಿ ಪಾಠಕ್ಕಿಂತಲೂ ಅನುಭವವನ್ನು ಹೆಚ್ಚು ಅಪೇಕ್ಷಿಸುತ್ತಾರೆ ; ಶಾಸ್ತ್ರದ ವ್ಯಾಕರಣಕ್ಕಿಂತಲೂ ಕಲೆಯ ರಸದೂಟವನ್ನು ಅವರು ನಿರೀಕ್ಷಿಸುತ್ತಾರೆ. ಶಾಸ್ತ್ರ, ಕಲೆಗಳನ್ನು ಸಮರಸವಾಗಿ ಬೆರಸಿ, ಒಂದಕ್ಕೊಂದು ಇಂಬುಕೊಡುವಂತೆ ಮಾಡಬಲ್ಲ ಸಂಗೀತಗಾರರು ವಿರಳ. ಪಾಂಡಿತ್ಯದ ಬಲದಿಂದ ಕಛೇರಿ ಮಾಡಿ ಶ್ರೋತೃಗಳನ್ನೂ ಪಕ್ಕವಾದ್ಯದವರನ್ನೂ ಬೆದರಿಸಿ ಬಿಡುವುದು ಸಂಗೀತದ ಗುರಿಯಾಗಿರುವಾಗ, ಶ್ರೋತೃಗಳ ಸುಪ್ತ ಪ್ರಜ್ಞೆಯನ್ನು ಜಾಗೃತಗೊಳಿಸಿ ಅವರನ್ನು ರಸಸಮುದ್ರದಲ್ಲಿ ಮಿಾಯಿಸಬಲ್ಲ ಕಲಾವಿದರು ತೀರ ವಿರಳ. ಗಾಯನಾಚಾರ್ಯ ರಾಮಕೃಷ್ಣ ವಝೆಯವರು ಆ ವಿರಳರಲ್ಲಿ ಒಬ್ಬರು.

ಇಂದು ರಾಮಕೃಷ್ಣರು ಸಂಗೀತದ ಕಳಸದಂತಿದ್ದಾರೆ. ಸಂಗೀತ ಶಾಸ್ತ್ರ, ಕಲೆ ಎರಡರಲ್ಲಿಯೂ ಅವರ ಅಭಿಪ್ರಾಯಕ್ಕೆ ವೇದಕ್ಕಿರುವ ಬೆಲೆ. ಈ ಸ್ಥಾನವನ್ನು ರಾಮಕೃಷ್ಣರು ದಟ್ಟದಾರಿದ್ರ್ಯಾವಸ್ಥೆಯಿಂದ ವಿಕಾಸ ಹೊಂದಿ ದೊರಕಿಸಿಕೊಂಡಿದ್ದಾರೆಂದಲ್ಲಿ ಆಶ್ಚರ್ಯವಾಗದಿರದು. ಅವರ ಗಾನದಂತೆ ಜೀವನವೂ ಆಶ್ಚರ್ಯವನ್ನುಂಟುಮಾಡುತ್ತದೆ. ಇದು ಸಾಹಸ, ಶ್ರದ್ಧೆ, ಕಲಾಭಿಮಾನಗಳ ಒಂದು ಮಹಾಕಾವ್ಯವಾಗಿದೆ.

ರಾಮಕೃಷ್ಣರು ಹುಟ್ಟಿದ್ದು ಸಾವಂತವಾಡಿ ಸಂಸ್ಥಾನದ ಓಜ್ರೆಯೆಂಬ ಹಳ್ಳಿಯಲ್ಲಿ. ಹತ್ತು ತಿಂಗಳ ಮಗುವಾಗಿರುವಾಗಲೇ ತಂದೆ ತೀರಿಕೊಂಡರು.

ತಾಯಿ ಆ ಊರು ಬಿಟ್ಟು ಮಗುವನ್ನು ಕರೆದುಕೊಂಡು ಕಾಗಲ ಸಂಸ್ಥಾನಕ್ಕೆ ಬಂದು ನೆಲಸಿದರು. ಆರನೆಯ ವರ್ಷದಿಂದ ಶಾಲೆಯ 'ಓದು' ಆರಂಭವಾಯಿತು. ಮೂರು ನಾಲ್ಕು ಈಯತ್ತೆಗಳನ್ನು ದಾಟುವ ಹೊತ್ತಿಗೆ ಸಾಕು ಸಾಕಾಗಿ ಹೋಯಿತು. ಮೊದಲಿನಿಂದಲೂ ಕಿಡಿಯಾಗಿ ಹುದುಗಿದ್ದ ಸಂಗೀತಪ್ರೇಮವನ್ನು ಶಾಲೆಯ ಒಂದು ಬಹುಮಾನ ಕೆರಳಿಸಿಬಿಟ್ಟಿತು. ರಾಮಕೃಷ್ಣರು ಶಾಲೆಗೆ ಶರಣು ಹೊಡೆದು 'ಪೋಲಿ'ಗಳ ಸಹವಾಸ ಮಾಡಲಾರಂಭಿಸಿದರು. ಅವರ ಸಹವಾಸದಲ್ಲಿ ಗ್ರಾಮಗೀತೆಗಳ ಮತ್ತು ಲಾವಣಿಗಳ ಪಾಠ ದೊರೆಯಿತು. ತಾಯಿ, ಮಗನ ಸಂಗೀತ ಪ್ರೇಮವನ್ನು ನೋಡಿ ಅದನ್ನಾದರೂ ಕಲಿಯಲೆಂದು ದರ್ಬಾರು ವಿದ್ವಾಂಸರಾದ ಪೊಹರೆ ಬಳವಂತರಾಯರ ಗುರುತ್ವವನ್ನು ದೊರಕಿಸಿಕೊಟ್ಟಳು. ಅವರಲ್ಲಿ ಎರಡು ವರ್ಷ ಅಭ್ಯಸಿಸಿ ಅನಂತರ ವಿಠೋಬ ಅಣ್ಣಾ ಹಡಪ ಎಂಬುವರಲ್ಲಿ ಒಂದು ವರ್ಷ ಅಭ್ಯಾಸ ಮಾಡಿದರು. ಮಗ ವಯಸ್ಸಿಗೆ ಬಂದನೆಂದು ತಾಯಿ ಅವನ ೧೨ನೆಯ ವಯಸ್ಸಿನಲ್ಲಿ ಲಗ್ನವನ್ನೂ ಮಾಡಿಬಿಟ್ಟರು. ರಾಮಕೃಷ್ಣರ ಮನಸ್ಸೆಲ್ಲಾ ಪ್ರೌಢ ಸಂಗೀತ ಶಿಕ್ಷಣದ ಕಡೆಗಿತ್ತು. ಊರಿನಲ್ಲಿ ಸಾಕಷ್ಟು ಅನುಕೂಲಗಳಿಲ್ಲದಿರಲು ಭಿಕ್ಷಾಟನ ವೃತ್ತಿಯನ್ನು ಅವಲಂಬಿಸಿ ಮುಂಬಯಿಯ ದಾರಿ ಹಿಡಿದು ಹೊರಟು ಬಿಟ್ಟರು.

ಮುಂಬಯಿಯಲ್ಲಿ ರಾಮಕೃಷ್ಣರಿಗೆ ಒಬ್ಬ ಹರಿದಾಸರ ಪರಿಚಯವಾಯಿತು. ಅವರ ಜತೆಯಲ್ಲಿ ಕೆಲಕಾಲವಿದ್ದರು. ಹರಿದಾಸರ ಸೇವೆಗಿಂತಲೂ ಹೆಚ್ಚಾಗಿ ಅವರ ಕುದುರೆಯ ಸೇವೆಯನ್ನು ಮಾಡಬೇಕಾಗುತ್ತಿತ್ತು. ಒಂದು ಸಲ ಭೂಸಾವಲಿಗೆ ಹೋಗಿದ್ದಾಗ ಕುದುರೆ ಮುಂದಡಿಯಿಡುವುದಿಲ್ಲವೆಂದು ಹಟ ಹಿಡಿಯಿತು. ರಾಮಕೃಷ್ಣರು ಬೇಸರಗೊಂಡು ಹರಿದಾಸರ ಸೇವೆಯನ್ನು ಬಿಟ್ಟು ಇಂದೋರಿಗೆ ಹೋಗಿ ಅಲ್ಲಿಂದ ಗ್ವಾಲ್ಹಿಯರಿಗೆ ತೆರಳಿದರು.

ಗ್ವಾಲಿಯರಿನಲ್ಲಿ ಮತ್ತೆ ಗುರುವನ್ನು ಹುಡುಕುವುದಕ್ಕೆ ಆರಂಭಿಸಿದರು. ಭಿಕ್ಷಾಟನೆಮಾಡಿಕೊಂಡು ಧರ್ಮಶಾಲೆಯಲ್ಲಿ ವಾಸಮಾಡಿಕೊಂಡು ಲಂಗೋಟಿ ಹಾಕಿಕೊಂಡು ಹಾಡಿಕೊಂಡು ಭಿಕ್ಷಕ್ಕೆ ಹೋಗುವ ಈ ದರಿದ್ರ ಬಾಲಕನನ್ನು ಯಾರು ಶಿಷ್ಯನನ್ನಾಗಿ ಸ್ವೀಕರಿಸಬೇಕು? ಒಂದು ದಿವಸ

ತನ್ನ ಮಧುಕರಿಯಾತ್ರೆ ಸಾಗಿಸಿದ್ದಾಗ ಸೌ॥ ಬಯ್ಯಾಬಾಯಿ ಆಪ್ಟೆ ಎಂಬ ಶ್ರೀಮಂತ ಹೆಣ್ಣು ಮಗಳು ರಾಮಕೃಷ್ಣರ ಹಾಡಿಕೆಯನ್ನು ಕೇಳಿ ಅವರಿಗೆ ಸಹಾಯ ಮಾಡುವುದಕ್ಕೆ ಒಪ್ಪಿದಳು. ಆಕೆಯ ದಯೆಯಿಂದ ಅನೇಕ ವಿದ್ವಾಂಸರ ಕಛೇರಿಗಳನ್ನು ಕೇಳುವ ಸೌಲಭ್ಯ ದೊರೆತದ್ದಲ್ಲದೆ ಪ್ರಸಿದ್ಧ ಖಾ ಸಾಹೇಬ್ ನಿಸ್ಸಾರ್ ಹುಸೇನ್ ಖಾನ್‌ರವರ ಗುರುತ್ವವೂ ಲಭಿಸಿತು. ಅಂದಿನಿಂದ ರಾಮಕೃಷ್ಣರ ಭಾಗ್ಯದ ಬಾಗಿಲು ತೆರೆಯಿತು. ಖಾನಸಾಹೇಬರ ಪಾಠದ ಕ್ರಮ ಸ್ವಲ್ಪ ವಿಚಿತ್ರವಾಗಿತ್ತು. ಲಹರಿ ಬಂದರೆ ಗಂಟೆಗಟ್ಟಳೆ ಹೇಳಿಕೊಡುತ್ತಿದ್ದರು; ಮನಸ್ಸು ಬರದಿದ್ದರೆ ದಿವಸಗಟ್ಟಳೆ ಕಣ್ಣೆತ್ತಿ ನೋಡುತ್ತಿರಲಿಲ್ಲ. ಹೇಳಿದ ಪಾಠ ಕಂಠಪಾಠವಾಗಬೇಕೆ ವಿನಾ ಕಾಗದದ ಮೇಲೆ ಹೋಗಕೂಡದು. ಒಂದು ದಿವಸ ರಾಮಕೃಷ್ಣರು ಇದ್ದಿಲಿನಲ್ಲಿ ಬರೆದುಕೊಳ್ಳುತ್ತಿದ್ದುದನ್ನು ಕಂಡು ಖಾನ ಸಾಹೇಬರು ಒಂದು ತಿಂಗಳು ಪಾಠ ಹೇಳಿಕೊಡಲಿಲ್ಲ. ಬೆಳಗ್ಗೆ ನಾಲ್ಕು ಗಂಟೆಯಿಂದ ಪಾಠ ಸಾಗುತ್ತಿತ್ತು. ಅಭ್ಯಾಸಕ್ಕೆ ತಂಬೂರಿಯನ್ನು ಕೊಳ್ಳಲೂ ಗತಿಯಿಲ್ಲ. ಕಟ್ಟಿಗೆಗೆ ತಂತಿ ಕಟ್ಟಿಕೊಂಡು ಒಂದು ತಂಬೂರಿಯನ್ನು ರಾಮಕೃಷ್ಣರು ಅಳವಡಿಸಿ ಕೊಂಡಿದ್ದರು. ಜನಗಳು ಅದನ್ನು ನೋಡಿ ನಗುತ್ತಿದ್ದರು, ಕುಚೇಷ್ಟೆ ಮಾಡುತ್ತಿದ್ದರು. ಏನಾದರೂ ಕೂಡ ರಾಮಕೃಷ್ಣರು ಅಧೈರ್ಯಗೊಳ್ಳು ತ್ತಿರಲಿಲ್ಲ.

ರಾಮಕೃಷ್ಣರು ಗುರುಗಳ ಪಾಠಕ್ಕಷ್ಟೇ ತೃಪ್ತರಾಗಿರಲಿಲ್ಲ. ಯಾವ ಹಾಡು ಕಿವಿಯಮೇಲೆ ಬೀಳಲಿ, ಯಾವ ಚಾಲ್ ಹೊಸದಾಗಿರಲಿ ಅವು ಗಳನ್ನು ಕಲಿಯಲೇಬೇಕು. ಕಲಿಯುವುದರಲ್ಲಿ ಮೇಲುಕೀಳೆನ್ನದೆ ಗ್ರಾಮ ಗೀತೆಗಳಿಂದ ಪಲ್ಲವಿಗಳವರೆಗೂ ಒಂದೇ ವಾತ್ಸಲ್ಯದಿಂದ ಕಲಿಯುತ್ತಿದ್ದರು. ಹೀಗೆ ಹತ್ತು ವರ್ಷ ಅಭ್ಯಾಸ ಸಾಗಿತು.

ಗುರುಗಳ ಅಪ್ಪಣೆ ಪಡೆದು ರಾಮಕೃಷ್ಣರು 'ಅದೃಷ್ಟ ಪರೀಕ್ಷೆ'ಗೆ ಹೊರಟರು. ಉಮ್ರಾವತಿಯಲ್ಲಿ ವಕೀಲ ದಾದಾಸಾಹೇಬ್ ಜೋಗ್‌ರವರ ಪರಿಚಯವಾಯಿತು. ವಕೀಲಸಾಹೇಬರು ತರುಣ ವಿದ್ವಾಂಸರನ್ನು ಮೆಚ್ಚಿ ಅವರಿಗೆ ಅನೇಕ ಪ್ರಮುಖ ಜನರ ಪರಿಚಯಮಾಡಿಕೊಟ್ಟರು. ಆಗ್ರಾ, ಜಯಪುರ, ಉದಯಪುರ, ರೇವಾ, ನಾಗಪುರ, ಬೆರ್ಹಾಂಪುರ ಮೊದಲಾದ

ಸ್ಥಳಗಳಲ್ಲಿ ಕಛೇರಿಗಳನ್ನು ನಡೆಸಿ ಕೀರ್ತಿ ಸಂಪಾದಿಸಿದರು. ಬರೇಲಿಯಲ್ಲಿ ಶ್ರೀ ಸ್ವಾಮಿ ವಿವೇಕಾನಂದರ ಪರಿಚಯವಾಯಿತು. ವಿವೇಕಾನಂದರು ರಾಮಕೃಷ್ಣರನ್ನು ೧೫ ದಿವಸ ತಮ್ಮ ಬಳಿಯಲ್ಲಿಯೇ ಇಟ್ಟುಕೊಂಡು ಅವರ ಗೀತೆ, ಭಜನಗಳನ್ನು ಕೇಳಿ ಆನಂದಿಸುತ್ತಿದ್ದರು. ಅಲ್ಲಿಂದ ನೇಪಾಳಕ್ಕೆ ಹೋದರು. ನೇಪಾಳದರಸರು ರಾಮಕೃಷ್ಣರ ಗಾಯನವನ್ನು ಪಾಶುಪತೇಶ್ವರ ದೇವಾಲಯದಲ್ಲಿ ಕೇಳಿ ಮೆಚ್ಚಿ ವಿಶೇಷವಾಗಿ ಸನ್ಮಾನಿಸಿದರು. ರಾಮಕೃಷ್ಣರು ಅಲ್ಲಿನ ಸಾಂಪ್ರದಾಯಿಕ ಗಾಯಕರನ್ನು ಹುಡುಕಿ ಅವರಿಂದ ಕೆಲವು ಗೀತಗಳನ್ನು ಕಲಿತರು. ಮುಂಬಯಿಗೆ ಬಂದರು. ಶ್ರೀ ಭಾಸ್ಕರ ಬೂವಾ ಬಖಲೆಯವರ ಜೊತೆಯಲ್ಲಿ ೩-೪ ಕಛೇರಿಗಳನ್ನು ಮಾಡಿ ಸಾಕಷ್ಟು ಕೀರ್ತಿ ಧನಗಳನ್ನು ಗಳಿಸಿದರು. ತಾಯಿಯ ಪಾದತಲದಲ್ಲಿ ಇವೆಲ್ಲವನ್ನು ಅರ್ಪಿಸಿ ಸಾರ್ಥಕ ಪಡೆಯಲು ತಾಯಿಯ ದರ್ಶನಕ್ಕೆ ಹೊರಟರು. ದರಿದ್ರನಾಗಿ ಊರು ಬಿಟ್ಟಿದ್ದ ಮಗ ಕೀರ್ತಿಶಾಲಿಯಾಗಿ ಪುಣ್ಯಶಾಲಿಯಾಗಿ ಹಿಂದಿರುಗಿದುದನ್ನು ಕಂಡು ತಾಯಿ ಹಿರಿ ಹಿರಿ ಹಿಗ್ಗಿದಳು. ತಾಯಿ ಮತ್ತು ಸತಿಯನ್ನು ಸಂಗಡಲೇ ಕರೆದುಕೊಂಡು ಪ್ರವಾಸವನ್ನು ಮುಂದುವರಿಸಿದರು. ಗೋವಾದಿಂದ ಕರೆ ಬಂತು. ಅಲ್ಲಿ ಲಾಮಗಾವಕರ್ ನಾನಾ ಸಾಹೇಬ್ ದೇಸಾಯಿಯವರಲ್ಲಿದ್ದು ಶ್ರೀಮತಿ ಕೇಸರಿಬಾಯಿಯವರಿಗೆ ಕೆಲವು ಕಾಲ ಪಾಠ ಹೇಳಿಕೊಟ್ಟರು. ಕಲ್ಕತ್ತೆಯ ಗೋಹರ್‌ಜಾನ್ ರಾಮಕೃಷ್ಣರ ಗಾಯನ ಕೇಳಿ ಮುಗ್ಧಳಾಗಿ ಕೆಲವು ಕಾಲ ಅವರ ಶಿಷ್ಯಳಾಗಿದ್ದಳು. ಮದರಾಸಿನ ಕಲಾಭಿಮಾನಿಗಳು ರಾಮಕೃಷ್ಣರನ್ನು ಕರೆಸಿಕೊಂಡು ಅವರ ಕೈಯಿಂದ ಸಂಗೀತ ಸಮಿತಿಯ ಆರಂಭೋತ್ಸವವನ್ನು ನೆರವೇರಿಸಿದರು.

ಇಂದು ಮಹಾರಾಷ್ಟ್ರದಲ್ಲಿ ಪ್ರಸಿದ್ಧರಾಗಿರುವ ಅನೇಕ ಗಾಯಕರು, ನಾಟಕ ಕಲಾಭಿಮಾನಿಗಳು ರಾಮಕೃಷ್ಣರ ಶಿಷ್ಯವರ್ಗಕ್ಕೆ ಸೇರಿದವರಾಗಿದ್ದಾರೆ. ನಾಟ್ಯ ಕಲಾ ಪ್ರವರ್ತಕ ಮಂಡಳಿಯ ಗೋಪಾಲರಾವ ಮರಾಠೆ, ಕೇಶವರಾವ್ ಭೋಸ್ಲೆ, ಪೆಂಡಾರ್‌ಕರ್, ದೀನಾನಾಥ, ದಿನಕರರಾವ್ ಘಾಟಕ್, ಹರಿಭಾವ್ ಘಾಂಕ್ರೇಕರ್ ಇವರೆಲ್ಲಾ ರಾಮಕೃಷ್ಣರ ಶಿಷ್ಯರೇ. ಕೇಶವರಾವ್ ಭೋಸ್ಲೆಯವರ ಗುರುಗಳಾದ ಜಾಂಭೇಕರ್ ಅವರೇ ಅವರನ್ನು ರಾಮಕೃಷ್ಣರಲ್ಲಿ ಶಿಕ್ಷಣಕ್ಕೆ ಕಳುಹಿಸಿಕೊಟ್ಟರು. "ಲಲಿತ ಕಲಾದರ್ಶ

ನಾಟಕ ಮಂಡಳಿ"ಯನ್ನು ಸ್ಥಾಪಿಸಿದಮೇಲೆ ಅವರಲ್ಲಿ ೧೦ ವರ್ಷ ರಾಮಕೃಷ್ಣರು ಗಾಯನಾಚಾರ್ಯರಾಗಿದ್ದರು. 'ಸನ್ಯಾಸಾಂಚಾ ಸಂಸಾರ' 'ರಣದುಂದುಭಿ' ಮೊದಲಾದ ನಾಟಕಗಳ ಸಂಗೀತವೆಲ್ಲಾ ರಾಮಕೃಷ್ಣರದೇ ಆಗಿತ್ತು. ಕರ್ನಾಟಕದಲ್ಲಿ ಗುರುರಾವ್ ದೇಶಪಾಂಡೆಯವರು ಶ್ರೀಯುತರ ಶಿಷ್ಯರು.

ಗಾಯನವಲ್ಲದೆ ವಾದ್ಯವಾದನವೂ ರಾಮಕೃಷ್ಣರಿಗೆ ಚೆನ್ನಾಗಿ ಸಾಧಿಸಿದೆ. ರಾಮಕೃಷ್ಣರಿಗೆ ದ್ರುಪದ, ಧುಮಾಲ್, ಖ್ಯಾಲ್, ತರಾನಗಳೆಂದರೆ ಬಹಳ ಪ್ರೀತಿ. ಮಲ್ಹಾರ, ಮಾಲಕಂಸ, ದುರ್ಗಾ, ತಿಲಕ ಕಾಮೂದ್, ಶಂಕರ ಮೊದಲಾದ ರಾಗಗಳನ್ನು ರಾಮಕೃಷ್ಣರ ಬಾಯಲ್ಲೇ ಕೇಳಬೇಕು. ತುಂಬಿದ ಗಂಡು ಶಾರೀರ—ತಾರಸ್ಥಾಯಿಗಿಂತಲೂ ಮಂದರದಲ್ಲಿ ಅದ್ಭುತವಾದ ಪ್ರತಿಭೆಯನ್ನು ತೋರುತ್ತಾರೆ. ರಾಗ ನಿಯೋಜನೆಯಲ್ಲಿ ವೈಯಕ್ತಿಕವಾದ ಗಾಂಭೀರ್ಯ ನಾವೀನ್ಯಗಳು ಕಂಡುಬರುತ್ತವೆ. ತಾನಗಳು ತುಂಬಿ ಬರುತ್ತವೆ. ಖಟ್ಕ ಮತ್ತು ತೀವ್ರಗತಿಯ ತಾನಗಳೆಂದರೆ ರಾಮಕೃಷ್ಣರಿಗೆ ಮಕ್ಕಳಾಟದಂತೆ.

ರಾಮಕೃಷ್ಣರ ಶಾಸ್ತ್ರಜ್ಞಾನಕ್ಕೆ ಅವರ 'ಸಂಗೀತಕಲಾ ಪ್ರಕಾಶ' ಗ್ರಂಥವೇ ಸಾಕ್ಷಿಯಾಗಿದೆ. ಆಗಾಗ್ಗೆ ಮರಾಟಿಯ ಮಾಸ ಪತ್ರಿಕೆಗಳಿಗೆ ಸಂಗೀತದ ಬಗ್ಗೆ ಲೇಖನಗಳನ್ನು ಬರೆಯುತ್ತಿರುತ್ತಾರೆ. ಇವರ ಪ್ರಾಚ್ಯ ಪೌರಾತ್ಯ ಸಂಗೀತ ಶೋಧನೆಗಳಿಗೆ ಸರ್ ಸಿ. ವಿ. ರಾಮನ್‌ರವರು ಅನೇಕ ರೀತಿಯಿಂದ ನೆರವಾಗುತ್ತಾರೆ.

ರಾಮಕೃಷ್ಣರ ಸಂಗೀತ ಪ್ರೌಢಿಮೆಗೆ ಒಂದು ದೃಷ್ಟಾಂತವಿದೆ. ಉಮ್ರಾವತಿಯಲ್ಲಿ ಒಂದು ಸಲ ವಕೀಲ ದಾದಾಸಾಹೇಬ್ ಜೋಗ್ ಅವರು ಭಯಂಕರ ವ್ಯಾಧಿಯಿಂದ ಹಾಸಿಗೆ ಹಿಡಿದು ಮಲಗಿದ್ದರು. ಡಾ|| ವಾಲೇಸ್ ರೆಂಬ ಒಬ್ಬ ಐರೋಪ್ಯ ಡಾಕ್ಟರು ಚಿಕಿತ್ಸೆ ನಡೆಸುತ್ತಿದ್ದರು. ಆಗ ಅಕಸ್ಮತ್ತಾಗಿ ಜೋಗ್‌ರವರು ರಾಮಕೃಷ್ಣರ ಗಾನವನ್ನು ಕೇಳಿ ಹುರಿಗೊಂಡು ಎದ್ದು ಕುಳಿತರು. ವ್ಯಾಲೆಸ್‌ರವರು ಈ ಕೌತುಕವನ್ನು ನೋಡಿ "ಡಾಕ್ಟರು ಮಾಡದ ಕೆಲಸವನ್ನು ನೀವು ಮಾಡಿರುವಿರಿ" ಎಂದು ಹೇಳಿದರಂತೆ.

ರಾಮಕೃಷ್ಣರಲ್ಲಿರುವ ಅಲೌಕಿಕವಾದ ಪ್ರೌಢಿಮೆ, ಕ್ರಿಯಾಶಕ್ತಿ, ಶಾಸ್ತ್ರ ಪರಿಚಯ, ಕಲಾನೈಪುಣ್ಯ ಬಹಳ ಜನ ಹಿರಿಯ ಸಂಗೀತಗಾರರಲ್ಲಿಯೂ ಇರುವುದಿಲ್ಲ. ಇವರು ಏನೇ ಹಾಡಲಿ ಅದು ಇವರ ವೈಶಿಷ್ಟ್ಯವನ್ನು ನಿರ್ದೇಶಿಸುತ್ತದೆ. ಮುಂಬಯಿ ರೇಡಿಯೋನಲ್ಲಿ ತಿಂಗಳಿಗೆ ಒಂದೆರಡು ಸಲವಾದರೂ ರಾಮಕೃಷ್ಣರ ವಾಣಿ ಕೇಳಬರುತ್ತದೆ. ಕೊಲಂಬಿಯಾ ಕಂಪೆನಿಯವರು ಇವರ ಕೆಲವು ಹಾಡುಗಳನ್ನು ರಿಕಾರ್ಡುಮಾಡಿ ಉಪಕಾರ ಮಾಡಿದ್ದಾರೆ.

ಶ್ರೀಯುತರು ಕೆಲವು ಕಾಲ ಬೆಳಗಾಂವಿಯಲ್ಲಿ ವಾಸವಾಗಿದ್ದರು. ಈಗ ಮುಂಬಯಿಯಲ್ಲೇ ಇರುತ್ತಾರೆ. ಕನ್ನಡಿಗರಾಗಿ ಕನ್ನಡತನವನ್ನು ಮರೆತಿರುವವರಲ್ಲಿ ಇವರೊಬ್ಬರೆಂದು ದುಃಖದಿಂದ ಹೇಳಬೇಕಾಗಿದೆ. ಶ್ರೀಯುತರು ಕರ್ನಾಟಕಕ್ಕೆ ಹಿಂದಿರುಗಿ ತಮ್ಮ ನಾಡ ಮತ್ತು ನಾಡಕಲೆಗಳ ಸೇವೆಯನ್ನು ಸಲ್ಲಿಸಬೇಕೆಂದು ಸೂಚಿಸಿದಲ್ಲಿ ತಪ್ಪಾಗಲಾರದು.

## ತರುವಾಯ

ಕಳೆದ ವರ್ಷ ಶ್ರೀ ರಾಮಕೃಷ್ಣ ಬೂವಾ ಅವರು ಪರಲೋಕವಾಸಿಗಳಾದರು. ಸಂಗೀತ ಪ್ರಪಂಚಕ್ಕೆ ಇವರ ನಿಧನದಿಂದ ಅಪಾರ ಹಾನಿಯಾಗಿದೆ.

೩೧-೩-೪೬

---



ಕೆ. ವಾಸುದೇವಾಚಾರ್ಯ

ಪುಟ ೭೬



ರಾಜಾರಾಯ

## ೧೨. ವೀಣೆ ರಾಜಾರಾಯರು

೧೯೩೨ರಲ್ಲಿ ನಾನು ಮೈಸೂರಿಗೊಮ್ಮೆ ಹೋಗಿದ್ದಾಗ ನನ್ನ ಗೆಳೆಯರೊಬ್ಬರನ್ನು ಕಾಣಲು ಹೋದೆ. ನಾವು ಮಾತನಾಡುತ್ತ ಕುಳಿತಿದ್ದಂತೆ ಹಳ್ಳಿಯ ಶಾನುಭೋಗರ ಹಾಗೆ ಕಾಣುತ್ತಿದ್ದ ಮಹಾಶಯರೊಬ್ಬರು ಬಂದರು. ಗೆಳೆಯರೆದ್ದು ಅವರನ್ನು ಗೌರವಾದರಗಳಿಂದ ಸ್ವಾಗತಿಸಿ ನನ್ನ ಪರಿಚಯ ಮಾಡಿಕೊಟ್ಟು,

"ಇವರು ಯಾರು ಗೊತ್ತೇ."

ಎಂದು ಕೇಳಿದರು.

"ಇಲ್ಲ. ಗೊತ್ತಿಲ್ಲ" ಎಂದೆ.

"ವೀಣೆ ವಿದ್ವಾನ್ ಲಕ್ಷ್ಮೀನಾರಣಪ್ಪನವರು."

"ಹೆಸರು ಕೇಳಿದ್ದೇನೆ. ತಮ್ಮ ವೀಣೆ ಕೇಳುವ ಸುಸಂಧಿ ದೊರೆತಿಲ್ಲ."

ಎಂದೆ. ಲಕ್ಷ್ಮೀನಾರಣಪ್ಪನವರು ವಿನಯದಿಂದ "ಅದಕ್ಕೇನು ಸ್ವಾಮಿ. ತಾವು ಯಾವಾಗ ಬಂದರೂ ನುಡಿಸುತ್ತೇನೆ." ಎಂದರು.

"ರಾತ್ರಿ ತಮ್ಮ ಮನೆಗೆ ಬರಲೇ."

"ಅಗತ್ಯವಾಗಿ ಬನ್ನಿ."

ಮೈಸೂರಿನ ಗುರುಶಂಕರ ಮಂದಿರದ ರಸ್ತೆಯಲ್ಲಿ ಲಕ್ಷ್ಮೀನಾರಣಪ್ಪನವರ ಮನೆ. ಮನೆಯೂ ಅವರ ಹಾಗೇ ನಿರಾಡಂಬರ ಮೂರ್ತಿ. ನಮ್ಮ

ಹಾದಿ ನೋಡುತ್ತಾ ಲಕ್ಷ್ಮೀನಾರಣಪ್ಪನವರು ನಿಂತಿದ್ದರು. ತೊಟ್ಟಿಯಲ್ಲಿ ವಾದ್ಯಗಳು ಸಿದ್ಧಮಾಡಿಡಲ್ಪಟ್ಟಿದ್ದವು.

ಲಕ್ಷ್ಮೀನಾರಣಪ್ಪನವರು ವೀಣೆ ವಾದ್ಯವನ್ನು ಕೈಗೆ ತೆಗೆದುಕೊಂಡರು. ಜತೆಗೆ ಅವರ ಮಗ ರಾಜಾ ವೀಣೆ ಹಿಡಿದು ಕುಳಿತ. ತಂತಿಯ ಒಂದು ಮೀಟು ಹಾಕುವುದಕ್ಕಿಲ್ಲ, ವಿದ್ವಾಂಸರ ಮುಖದ ಕಳೆಯೇ ಬದಲಾಯಿಸಿತು. ನಮ್ಮ ಮುಂದೆ ಕುಳಿತಿದ್ದವರು ಶಾನುಭೋಗರ ಹಾಗೆ ಕಾಣುತ್ತಿದ್ದ ಲಕ್ಷ್ಮೀನಾರಣಪ್ಪನವರಲ್ಲ, ಸರ್ವಾಂಗ ಸುಂದರ ಮೂರ್ತಿ. ಸುಮಾರು ಎರಡು ಗಂಟೆಕಾಲ ನುಡಿಸಿದರು. ನಾದಸಂಭ್ರಮ ನಿಂತಾಗಲೇ ನಮಗೆ ಎಚ್ಚರ.

"ತಮ್ಮದು ಅಸ್ಯಾದೃಶ್ಯ ಪಾಂಡಿತ್ಯ"

ಎಂದೆ. ಲಕ್ಷ್ಮೀನಾರಣಪ್ಪನವರು ಮಗುವಿನಂತೆ ಮೆಚ್ಚುಗೆಯ ಮಾತುಗಳನ್ನು ಸ್ವೀಕರಿಸಿದರು. ತುಂಬಿದ ಕೊಡದಂತಿದ್ದ ಆ ವಿದ್ವಾಂಸರಲ್ಲಿ ವಿನಯ, ಸೌಶೀಲ್ಯಗಳು ಮೂರ್ತೀಭವಿಸಿದ್ದವು.

ಲಕ್ಷ್ಮೀನಾರಣಪ್ಪನವರ ಹೆಸರು ಸಂಗೀತ ಪ್ರಪಂಚದಲ್ಲಿ ಎಷ್ಟು ಗುಡುಗಾಡಬೇಕಾಗಿತ್ತೊ ಅಷ್ಟು ಗುಡುಗಾಡಲಿಲ್ಲ. ಇದರ ಕಾರಣ ಅವರ ಅತ್ಯಂತ ಸರಳ ಜೀವನ. ಸ್ತುತಿಯನ್ನು ಬಯಸದೆ, ನಿಂದೆಗೆ ಎದೆಗುಂದದೆ ಸಂಗೀತ ಪ್ರಾಣರಾಗಿದ್ದವರು ಅವರು. ಮಾತೇ ಅರಿಯರು. ಆಡಿದರೆ ತೂಕ ತಪ್ಪದ ಮಿತವಾದ, ಹಿತವಾದ ಒಂದೊಂದು ಮಾತು.

ಅವರ ಮನೆಯಲ್ಲಿ ಸಂಗೀತ ಕೇಳಿದ ಮೇಲೆ ಲಕ್ಷ್ಮೀನಾರಣಪ್ಪನವರ ವಾದ್ಯವಾದನವನ್ನು ಹಲವು ಸಲ ನನ್ನ ಗೆಳೆಯರ ಮನೆಯಲ್ಲಿ ಕೇಳಿದ್ದೇನೆ. ರಾಗ ಲಕ್ಷಣವನ್ನರಿಯಲು ಒಂದೊಂದು ರಾಗವನ್ನು ಅವರಿಂದ ವಿಸ್ತಾರವಾಗಿ ನುಡಿಸಿ ಕೇಳಿದ್ದೇನೆ. ಅಹಂಕಾರಕ್ಕೆ ಸಮೀಪಿಸುವ ಮಾತನ್ನಾಗಲಿ ಆಚರಣೆಯನ್ನಾಗಲಿ ಅವರಲ್ಲಿ ನಾನು ಕಂಡುದಿಲ್ಲ, ಕೇಳಿದುದಿಲ್ಲ.

ಲಕ್ಷ್ಮೀನಾರಣಪ್ಪನವರ ಜತೆ ವಾದ್ಯ ನುಡಿಸಿದ ಅವರ ಮಗ ರಾಜನ ಕೈ ಚಳಕವನ್ನು ಕಂಡು ನಾನು ಅಂದೇ ಬೆರಗಾಗಿದ್ದೆ. ವೀಣೆ ವಾದ್ಯಗಳಲ್ಲಿ ಸ್ವಲ್ಪ ಕಠಿಣವಾದುದು. ರಾಗ ತಾಳಗಳ ಸಂಯೋಜನೆ ಅದರಲ್ಲಿದೆ. ಅಪಸ್ವರ, ಅಪಶ್ರುತಿ ಬರದ ಹಾಗೆ ನುಡಿಸುವುದು ಕಷ್ಟಸಾಧ್ಯ. ಎಳೆತನ

ದಲ್ಲಿಯೇ ರಾಜನಿಗೆ ವೀಣೆಯ ಮೇಲಿದ್ದ ಸ್ವಾಮ್ಯವನ್ನು ಕಂಡು 'ಈತ ನಾಳೆ ನಾಡಿಗೆ ಕೀರ್ತಿ ತರುತ್ತಾನೆ' ಎಂದು ನಿರ್ಧರಿಸಿಕೊಂಡೆ.

ರಾಜಾರಾಯರು ಎಳೆಯ ವಯಸ್ಸಿನಲ್ಲಿಯೇ ವೀಣಾವಾದನದಲ್ಲಿ ಪ್ರಾವೀಣ್ಯ ಪಡೆಯುವುದಕ್ಕೆ ಅವರ ಪರಂಪರೆಯೂ ಕಾರಣ. ತಂದೆ ಲಕ್ಷ್ಮೀನಾರಣಪ್ಪನವರು ಸಿದ್ಧ ವೈಣಿಕರು. ಅವರ ತಂದೆ ಕೃಷ್ಣಪ್ಪ ಮತ್ತು ದೊಡ್ಡಪ್ಪ ಶೀನಪ್ಪ ಇಬ್ಬರೂ ವೈಣಿಕರು. ಶೀನಪ್ಪನವರು ವೀಣೆಯಲ್ಲಿ ಮಾತ್ರವಲ್ಲದೆ ಪಿಟೀಲು ವಾದ್ಯವಾದನದಲ್ಲಿಯೂ ಪಂಡಿತರಾಗಿದ್ದರು. ಶೀನಪ್ಪನವರು ಮಹಾಮಾತೃಶ್ರೀ ಲಕ್ಷ್ಮೀವಿಲಾಸ ಸನ್ನಿಧಾನದವರ ವಿದ್ಯಾಗುರುಗಳಾಗಿದ್ದರು. ಕೃಷ್ಣಪ್ಪನವರು ೩೦೦ ಲಕ್ಷಣ ಗೀತೆಗಳ ಸಂಗ್ರಹಮಾಡಿದ್ದರು. ಈ ಮನೆತನ ಆರು ತಲೆಮಾರುಗಳಿಂದ ಸಂಗೀತ ವಿದ್ಯೆಗೆ ಹೆಸರು ಪಡೆದಿದೆ.

ರಾಜಾರಾಯರು ೨೬ ಮಾರ್ಚಿ ೧೯೧೯ರಲ್ಲಿ ಜನ್ಮ ತಾಳಿದರು. ಹತ್ತನೆಯ ವರ್ಷದಿಂದಲೇ ತಂದೆಯ ಬಳಿ ಬಾಯಿಪಾಡಿಕೆ ಆರಂಭವಾಯಿತು. ತಂದೆಯವರ ಗುರುಗಳಾದ ಸಂಗೀತಶಾಸ್ತ್ರರತ್ನ ವಾಸುದೇವಾಚಾರ್ಯರ ಜತೆಯಲ್ಲಿ ಕಛೇರಿಗಳಿಗೆ ಕುಳಿತು ಹಿನ್ನೆಲೆಯಲ್ಲಿ ಹಾಡುತ್ತಿದ್ದರು. ಹದಿನೇಳನೆಯ ವಯಸ್ಸಿನಿಂದ ವೀಣಾವಾದನಾಭ್ಯಾಸ ಆರಂಭವಾಯಿತು. ತಂದೆಯೇ ಗುರು.

ಲಕ್ಷ್ಮೀನಾರಣಪ್ಪನವರ ಪಾಠದ ಕ್ರಮ ಬಹಳ ಕಠಿಣವಾಗಿತ್ತು. ವ್ಯಾಪಾರಿ ಸಂಗೀತಗಾರರಂತೆ ದಿನಕ್ಕೊಂದು ಕೀರ್ತನೆ ಹೇಳಿಕೊಟ್ಟು ಶಿಷ್ಯ ನೂರಾರು ಕೀರ್ತನೆ ಹಾಡುತ್ತಾನೆ ಎಂದು ಹೇಳಿಕೊಳ್ಳುವುದು ಅವರ ಮನಸ್ಸಿಗೆ ಒಪ್ಪುತ್ತಿರಲಿಲ್ಲ. ಮೊದಲು ರಾಗ—ತಾಳಗಳ ಬುನಾದಿ ಭದ್ರವಾಗಬೇಕು. ಹಾಡುವುದು ಸ್ವಲ್ಪವಾದರೂ ಶಾಸ್ತ್ರೋಕ್ತವಾಗಿ ಹಾಡಬೇಕು. ಮೇಳಕರ್ತ ರಾಗಗಳ ಸಂಚಾರ ಕ್ರಮಬದ್ಧವಾಗಿ ಶಿಷ್ಯನಿಗರಿವಾದರೆ ಉಳಿದ ರಾಗಗಳನ್ನು ಅವನೇ ಹಾಡಿಕೊಳ್ಳಬಹುದು—ಎಂಬುದು ಲಕ್ಷ್ಮೀನಾರಣಪ್ಪನವರ ಮತ. ಶಿಷ್ಯನ ಮುಂದೆ ಗುರು ಹತ್ತಿಪ್ಪತ್ತು ಸಲ ಒಂದೊಂದು ಕೀರ್ತನೆ ಹಾಡಿ, ಅವನೇ ಅದಕ್ಕೆ ಸ್ವರಪ್ರಸ್ತಾರ ಹಾಕುವಂತೆ ಮಾಡುತ್ತಿದ್ದರು. ಇದರಿಂದ ಶಿಷ್ಯನಲ್ಲಿ ಕ್ರಿಯಾಜ್ಞಾನ ವೃದ್ಧಿಯಾಗುತ್ತಿದ್ದುದಲ್ಲದೆ,

ರಾಗದ ಕಟ್ಟಡ ಖಚಿತವಾಗಿ ಮನವರಿಕೆಯಾಗುತ್ತಿತ್ತು. ಒಂದೊಂದು ಕೀರ್ತನೆ ಮುಗಿಸುವುದಕ್ಕೆ ೨—೩ ತಿಂಗಳು ಹಿಡಿಯುತ್ತಿತ್ತು. ಇಂತಹ ಋಜುಮಾರ್ಗದಲ್ಲಿ ರಾಜಾರಾಯರ ಪಾಠ ತಂದೆಯ ಬಳಿ ೮ ವರ್ಷಕಾಲ ನಡೆಯಿತು.

ರಾಜಾರಾಯರ ಜೀವನದ ಒಂದು ಮಹಾಘಟ್ಟವೆಂದರೆ ಕೃಷ್ಣೋತ್ಸವ ಸಂದರ್ಭದಲ್ಲಿ ಅವರು ವೈಣಿಕಶಿಖಾಮಣಿ ಶೇಷಣ್ಣನವರ ಮುಂದೆ ನುಡಿಸಿದುದು. ತರುಣ ವಿದ್ವಾಂಸನ ವಾದ್ಯವಾದನವನ್ನು ಕೇಳಿ ಶೇಷಣ್ಣನವರು ಹರಸಿದರು. ೧೯೨೩ರಲ್ಲಿ ರಾಜಾರಾಯರು ಮೈಸೂರು ಬಿಟ್ಟು ಬೆಂಗಳೂರು ಸೇರಿದರು. ಮನೆಯ ಕಷ್ಟ ಸುಖದಲ್ಲಿ ವಿದ್ಯಾವ್ಯಾಸಂಗ ನಿಂತುಹೋಯಿತು. ಡಿಗ್ರಿ ಪರೀಕ್ಷೆಯ ಒಂದು ಭಾಗ ಪೂರೈಸಿಕೊಂಡು ರಾಜಾರಾಯರು ಕಾಲೇಜಿಗೆ ಶರಣು ಹೊಡೆಯಬೇಕಾಯಿತು.

ಬೆಂಗಳೂರಿನಲ್ಲಿ ರಾಜಾರಾಯರಿಗೆ ಹೃತ್ಪೂರ್ವಕ ಸ್ವಾಗತ ದೊರೆಯಿತು. ಕಛೇರಿಗಳಿಗೆ ಅವಕಾಶ, ಕೆಲವು ಉತ್ತಮ ಪಾಠಗಳು ದೊರೆತು ಅವರ ಪ್ರಾಪಂಚಿಕ ಸ್ಥಿತಿ ಸುಧಾರಿಸಿತು.

ತಂದೆಯೂ ಗುರುವೂ ಪರಮ ಸಾತ್ವಿಕ ಶಿರೋಮಣಿಗಳೂ ಆದ ಲಕ್ಷ್ಮೀನಾರಣಪ್ಪನವರು ೧೯೩೪, ಜನವರಿ ತಿಂಗಳು ೧೫ ವೈಕುಂಠವಾಸಿಗಳಾದರು. ರಾಜಾರಾಯರಿಗೆ ದಿಕ್ಕು ತೋರದಾಯಿತು. ತಂದೆಯ ಸ್ಮೃತಿಗೆ ತಕ್ಕ ಗೌರವವೆಂದರೆ ಅವರ ವಿದ್ಯೆಯನ್ನು ಬೆಳಸಿಕೊಂಡು ಪಸರಿಸುವುದು ಎಂಬ ಭಾವನೆ ರಾಜಾರಾಯರಿಗೆ ದುರ್ಭರ ಯಾತನೆಯನ್ನು ಸಹಿಸುವ ಶಕ್ತಿಯನ್ನು ದೊರಕಿಸಿಕೊಟ್ಟಿತು.

ಈ ಸನ್ನಿವೇಶದಲ್ಲಿ ರಾಜಾರಾಯರು ಸಂಗೀತವನ್ನು ಬಿಟ್ಟು ತಮ್ಮ ಡಿಗ್ರಿ ಮುಗಿಸಿಕೊಂಡು ಯಾವದಾದರೂ ಕಛೇರಿಯಲ್ಲಿ ಹುದ್ದೆ ಹಿಡಿಯಬಹುದಾಗಿತ್ತು. ಆದರೆ ಗುಮಾಸ್ತರ ಸೈನ್ಯ ಬೆಳಸುವುದಕ್ಕಿಂತ ಸಂಗೀತ ಕಲೆಯನ್ನು ಸಾಧಿಸುವುದು ಉಚಿತವೆಂದು ಅವರಿಗೆ ತೋರಿ ಬಂದುದು ಕನ್ನಡಿಗರ ಭಾಗ್ಯ.

ರಾಜಾರಾಯರು ವೀಣೆಯ ಅಭ್ಯಾಸಕ್ಕೆ ತನುಮನತೆತ್ತು ಕುಳಿತರು. ಹಗಲು ಇರುಳಾಯಿತು; ಇರುಳು ಹಗಲಾಯಿತು. ಸಾಧನೆಯ ಮಾರ್ಗ

ದಲ್ಲಿ ಮುಂದುವರಿಯುತ್ತಾ ನೂತನ ಸಂಚಾರಗಳು ತಾವೇ ಭಾಸವಾಗುತ್ತ ಬಂದವು.

೧೯೩೭ರಲ್ಲಿ, ಆಳಿದ ಮಹಾಸ್ವಾಮಿಯವರಾದ ಶ್ರೀಮನ್ನಾಲ್ಮಡಿ ಕೃಷ್ಣರಾಜವೊಡೆಯರವರ ಮುಂದೆ ವೀಣೆ ನುಡಿಸುವ ಸುಸಂಧಿ ದೊರೆಯಿತು. ರಾಜಾರಾಯರು ಮತ್ತು ಅವರ ತಮ್ಮ ಗೋಪಾಲರಾಯರು ಮಹಾಸ್ವಾಮಿಯರೆದುರಿಗೆ ಒಂದು ಗಂಟೆಕಾಲ ನುಡಿಸಿದರು. ಮಹಾಸ್ವಾಮಿಯವರು ತಾಳದ ಗುಣಿಕೆ ಹಾಕುತ್ತಲೇ ಇದ್ದರು. ಕಛೇರಿ ಮುಗಿಯಲು ಮಹಾಸ್ವಾಮಿಯವರು ತರುಣ ವಿದ್ವಾಂಸರ ಬಳಿ ಬಂದು ಹಲವು ಕುಶಲ ಪ್ರಶ್ನೆಗಳನ್ನು ಕೇಳಿ ' ಮೈಸೂರಿನ ಹೊರಗೆ ಹೋಗಿ, ನಮ್ಮ ದೇಶದ ಕಲೆಯ ಪ್ರಭಾವವನ್ನು ಪ್ರಸಾರಮಾಡಿ ' ಎಂದು ಸಂದೇಶವಿತ್ತರು. ಮಹಾಸ್ವಾಮಿಯವರ ಅಂತಃಕರಣ, ದೇಶವಾತ್ಸಲ್ಯ ತರುಣ ವಿದ್ವಾಂಸರ ಬಾಳಿಗೆ ಬೆಳಕನ್ನು ನೀಡಿದವು.

ಇಂದು ರಾಜಾರಾಯರು ಕರ್ನಾಟಕ ಸಂಗೀತ ಪ್ರಪಂಚದಲ್ಲಿ ಸ್ಥಾನಗಳಿಸಿಕೊಂಡಿದ್ದಾರೆ, ಸಂಗೀತವನ್ನು ಹಾಡಿ, ನುಡಿಸಿ ರಸಿಕರನ್ನು ತಲೆದೂಗಿಸುವ ಕಲೆಯನ್ನು ಸಾಧಿಸಿಕೊಂಡಿದ್ದಾರೆ. ಜತೆಗೆ ಸಂಗೀತ ಅದರ ಸಮಸ್ಯೆಗಳ ಬಗ್ಗೆ ಆಳವಾಗಿ ವಿಚಾರ ಮಾಡಿದ್ದಾರೆ. ಅವರೊಂದಿಗೆ ಸಂಭಾಷಿಸುತ್ತಾ ನಾನು ಕೆಲವು ಪ್ರಶ್ನೆಗಳನ್ನು ಕೇಳಿದೆ. ಅವುಗಳಿಗೆ ಬಂದ ಉತ್ತರಗಳಿಂದ ರಾಯರ ವಿಚಾರಪರತೆ ವ್ಯಕ್ತವಾಗುತ್ತದೆ.

" ನಿಮಗೆ ಅತ್ಯಂತ ಪ್ರಿಯವಾದ ರಾಗಗಳಾವುವು."

" ಖಚಿತವಾಗಿ ನಿರ್ದೇಶಿಸುವುದು ಕಷ್ಟ. ಆದರೆ ಕಲ್ಯಾಣಿ, ಭೈರವಿ, ಹಿಂದೋಳ, ಪೂರ್ವಿಕಲ್ಯಾಣಿ, ಧನ್ಯಾಸಿ, ನಾಟಕುರಂಜಿಗಳ ಮೇಲೆ ನನ್ನ ಒಲವು ಹೆಚ್ಚು."

" ಸಂಗೀತದ ಗುರಿಯೇನು ?"

" ಅದು ಜನತೆಯ ಶಿಕ್ಷಣದ ಸಾಧನವಾಗಬೇಕು. ಜನತೆಯ ಮನರಂಜನೆಯ ವ್ಯಾಜದಲ್ಲಿ ಅದು ಅವರ ಉತ್ಕರ್ಷದ ಸಾಧನವಾಗಬೇಕು."

" ನೀವು ಯಾವ ದಾರಿಯಲ್ಲಿ ಕೆಲಸಮಾಡಬೇಕೆಂದಿರುವಿರಿ ?"

"ಕನ್ನಡದಲ್ಲಿರುವ ಹಳೆಯ ಹಾಡುಗಳನ್ನು, ಜನಪದ ಗೀತೆಗಳನ್ನು ಸಂಗೀತಕ್ಕೆ ಅಳವಡಿಸಬೇಕೆಂದಿದ್ದೇನೆ. ಅವುಗಳಲ್ಲಿ ಕನ್ನಡ ಜನತೆಯ ಹೃದಯ ಚೆನ್ನಾಗಿ ಕಾಣುತ್ತದೆ."

"ದೃಷ್ಟಾಂತ"

"ಈಗ ಹರಿದಾಸರ ಕೀರ್ತನೆಗಳನ್ನು ಪ್ರಸ್ತಾರ ಹಾಕಿ ಪ್ರಕಟಿಸಿದ್ದೇನೆ. ಇನ್ನು ಮುಂದೆ ಶಿವಶರಣರ ಕೀರ್ತನೆ, ವಚನಗಳನ್ನು ಹಾಗೇ ಪ್ರಸ್ತಾರ ಸಹಿತ ಪ್ರಕಟಿಸಬೇಕೆಂದಿದ್ದೇನೆ. ಹಳೆಯ ಉತ್ತಮ ಹಾಡುಗಬ್ಬ ಯಾವದು ಸಿಕ್ಕಿದರೂ ನನಗೆ ಬೇಕು."

"ಹೊಸ ಕವಿತೆಗಳನ್ನೇಕೆ ಕೂಡಿಸಬಾರದು ?"

"ಅವು ಓದುಗಬ್ಬಗಳೇ ವಿನಾ ಹಾಡುಗಬ್ಬಗಳಲ್ಲ. ಸಂಗೀತ ಬಲ್ಲ ಕವಿಗಳು ಬರೆದರೆ ಅವು ಪ್ರಸ್ತಾರಕ್ಕೆ ಒಗ್ಗುತ್ತವೆ. ಆಧುನಿಕ ಗೀತೆಗಳಿಗೆ ಸಂಗೀತ ಹಾಕುವುದು ಬಹಳ ಕಷ್ಟ. ಅವು ತಾಳದ ಎಣಿಕೆಗೆ ಅಳ ಪಡುವುದಿಲ್ಲ."

"ರಾಗ ವಿಶಿಷ್ಟ ರಸಾವಲಂಬಿ ಎಂದು ಹಿಂದೂಸ್ಥಾನಿ ಗಾಯಕರ ಅಭಿಪ್ರಾಯ. ನಿಮ್ಮ ಅಭಿಪ್ರಾಯವೇನು ?"

"ಆ ಮತವನ್ನು ನಾನು ಒಪ್ಪುವುದಿಲ್ಲ. ತನಗೆ ಬೇಕಾದ ರಸಕ್ಕೆ ಹೊಂದುವಂತೆ ರಾಗವನ್ನು ಹಾಡುವುದು ಗಾಯಕನ ಕೈಯಲ್ಲಿದೆ. ಒಂದೇ ರಾಗದಿಂದ ಹಲವು ರಸಗಳನ್ನುವನ್ನು ಉತ್ಪಾದನೆ ಮಾಡಬಹುದು. ಒಂದು ರಾಗ ಒಂದು ರಸಕ್ಕೆ ಮೀಸಲೆಂಬ ಹಿಂದೂಸ್ಥಾನಿ ಗಾಯಕರ ಅಭಿಪ್ರಾಯ ವನ್ನು ನಾವು ಅನುಮೋದಿಸುವುದಿಲ್ಲ."

"ಈಗ ಟಾಕೀಗಳಿಗೆ ಉಪಯೋಗಿಸುತ್ತಿರುವ ಸಂಗೀತದ ಬಗ್ಗೆ ನಿಮ್ಮ ಅಭಿಪ್ರಾಯವೇನು ?"

"ಟಾಕೀಗಳಿಗೂ ಶುದ್ಧ ಸಂಗೀತವನ್ನೇ ಹಾಕಬೇಕು. ಶುದ್ಧ ಸಂಗೀತದಲ್ಲಿ ಜನರಂಜನೆಯ ಅಂಶವಿಲ್ಲವೆಂಬ ಮಾತು ಸುಳ್ಳು. ಸಾವಿ ರಾರು ರಾಗಗಳು ಬೆಳಕು ಕಾಣದೆ ಬಿದ್ದಿವೆ. ಅವುಗಳನ್ನಾಯ್ದುಕೊಂಡರೆ ಜನರಂಜನೆಯನ್ನು ಮಾಡಬಹುದು, ಉತ್ತಮ ಸಂಗೀತವನ್ನೂ ಕೊಡ ಬಹುದು. ಈಗ ಟಾಕೀಗಳಿಗೆ ಉಪಯೋಗವಾಗುತ್ತಿರುವ ಸಂಗೀತ ಉತ್ತಮ

ದರ್ಜೆಯದಲ್ಲವೆನ್ನುವುದಕ್ಕೆ ಅವುಗಳ ಅಲ್ಪಾಯುತನವೇ ಸಾಕ್ಷಿ. ನಿನ್ನೆ ಎಲ್ಲರ ಬಾಯಲ್ಲಿ ಮೊರೆಯುತ್ತಿದ್ದ ಹಾಡು ಇಂದಿಗೆ ಹಳಸಲು ಪದಾರ್ಥ. ಉತ್ತಮ ಸಂಗೀತ ಯಾವಾಗಲೂ ರುಚಿಸುತ್ತದೆ "

"ಕರ್ನಾಟಕ ಪದ್ಧತಿಯಲ್ಲಿ ಮೇಳ ಸಂಗೀತ ಕೂಡಿಸಲು ಸಾಧ್ಯವೇ ?"

"ಕೂಡಿಸುವ ಪ್ರಯತ್ನ ನಡೆದಿದೆ. ಆದರೆ ಅದು ಅಷ್ಟು ಯಶಸ್ವಿಯಾಗಿದೆಯೆಂದು ನನಗನಿಸುವುದಿಲ್ಲ. ಮೇಳ ಸಂಗೀತ ಆಂಗ್ಲ ಸಂಗೀತದ ಅನುಕರಣ. ನಮ್ಮ ಸಂಗೀತದಲ್ಲಿ ಸ್ವರ ಮಾಧುರ್ಯಕ್ಕೆ ಪ್ರಾಧಾನ್ಯ; ಅವರ ಸಂಗೀತದಲ್ಲಿ ತಾಳ ವೈವಿಧ್ಯಕ್ಕೆ ಪ್ರಾಧಾನ್ಯ. ನಮ್ಮ ಸಂಗೀತ ವೈಯಕ್ತಿಕ ಹಾಗೂ ಭಾವನಾಸ್ಪದ. ಮೇಳ ಸಂಗೀತದ ಹಲವು ವಾದ್ಯಗಳ ಹೋರಾಟಕ್ಕೆ ನಮ್ಮ ಸಂಗೀತ ಒಗ್ಗುವುದಿಲ್ಲ."

"ಕರ್ನಾಟಕ ಸಂಪ್ರದಾಯದ ಯಾವ ಯಾವ ವಿದ್ವಾಂಸರನ್ನು ನೀವು ಮಾನಿಸುತ್ತೀರಿ."

"ಒಬ್ಬೊಬ್ಬರಲ್ಲಿ ಒಂದೊಂದು ವೈಶಿಷ್ಟ್ಯವಿದೆ. ಚಿಕ್ಕರಾಮರಾಯರ ಲಯ—ವಿನ್ಯಾಸ ಅನ್ಯಾದೃಶ; ವಾಸುದೇವಾಚಾರ್ಯರ ರಾಗ, ತಾನಗಳು ಗಂಗಾಲಹರಿಯಂತೆ; ದೇವೇಂದ್ರಪ್ಪನವರ ವೈವಿಧ್ಯ ಚಿತ್ತಾಪಹಾರಿ. ಇವರು ನನ್ನ ಮೆಚ್ಚಿನ ವಿದ್ವಾಂಸರು."

"ದಕ್ಷಿಣದ ವಿದ್ವಾಂಸರಲ್ಲಿ."

"ಟೈಗರ್ ವರದಾಚಾರ್ಯರು, ಅರಿಯಾಕುಡಿ ರಾಮಾನುಜ ಅಯ್ಯಂಗಾರ್ಯರು ಮತ್ತು ಶಮ್ಮಂಗುಡಿ ಶ್ರೀನಿವಾಸ ಅಯ್ಯರ್."

"ನಿಮ್ಮ ಶಿಷ್ಯರಲ್ಲಿ ಯಾರು ಯಾರು ನಿಮಗೆ ಒಪ್ಪು."

"ನಮ್ಮ ಶ್ರೀ ಸಿ. ಕೆ. ವೆಂಕಟರಾಮಯ್ಯನವರ ಮಗ ಸಿ. ವಿ. ನಾಗರಾಜ ನನ್ನಲ್ಲಿ ಬಾಯಿ ಹಾಡಿಕೆ ಕಲಿಯುತ್ತಿದ್ದಾನೆ. ಅವನೂ ಪಿಟೀಲು ಕಲಿಯುತ್ತಿರುವ ಸುಬ್ಬಾಶಾಸ್ತ್ರಿ ತುಂಬ ಆಶಾಂಕುರವನ್ನುಂಟು ಮಾಡಿದ್ದಾರೆ."

ರಾಜರಾಯರ ಕಲಾನೋಟ, ಉನ್ನತ ಅಭಿರುಚಿ, ದೊಡ್ಡ ಗುರಿಗಳಿಗೆ ಈ ಸಂಭಾಷಣೆಯೇ ಸಾಕು ನಿದರ್ಶನ. ಶಿಷ್ಯರಿಗೆ ಸಂಗೀತ ವಿದ್ಯಾ

ದಾನ ಮಾಡುತ್ತಿರುವುದಲ್ಲವೆ ಶ್ರೀಯುತರು ೧೯೪೨ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ 'ಹರಿದಾಸರ ಕೃತಿಗಳು' ಪುಸ್ತಕವನ್ನು ಪ್ರಕಟಿಸಿ ಕಲಾಪ್ರಪಂಚಕ್ಕೆ ಮಹೋಪಕಾರಮಾಡಿದ್ದಾರೆ.

'ಹರಿದಾಸರ ಕೃತಿಗಳು' ಗ್ರಂಥದಲ್ಲಿ ವ್ಯಾಸರಾಯ ಸ್ವಾಮಿಗಳು, ಜಗನ್ನಾಥದಾಸರು, ವಿಜಯದಾಸರು, ಕನಕದಾಸರು, ಪುರಂದರದಾಸರು ಮೊದಲಾದ ಹರಿದಾಸರ ೪೦ ಕೃತಿಗಳಿಗೆ ಸಂಗೀತದ ಅಲ್ಪ ಪರಿಶ್ರಮವುಳ್ಳವರೂ ಸುಲಭವಾಗಿ ಅನುಸರಿಸಲಾಗುವಂತೆ ಪ್ರಸ್ತಾರ ಹಾಕಿ ಪ್ರಕಟಿಸಿದ್ದಾರೆ. ಗ್ರಂಥದ 'ಬಿನ್ನಹ'ದಲ್ಲಿ ತಾವು ಅನುಸರಿಸಿದ ಮಾರ್ಗವನ್ನು ಕುರಿತು ಹೇಳಿರುವ ಮಾತುಗಳು ಮನನೀಯವಾಗಿವೆ. "ಕೃತಿಗಳಿಗೆ ರಾಗವನ್ನು ಗೊತ್ತುಮಾಡುವುದರಲ್ಲಿ ಹಲ ಕೆಲವು ಕಡೆ ರೂಢಿಯನ್ನು ಬಿಟ್ಟು ಹೋಗಿರುತ್ತೇನೆ. ತಾಳ ಯಾವುದೆಂಬುದು ಸಾಹಿತ್ಯದ ಓಟದಿಂದಲೇ ನಿರ್ಧರವಾಗಿ ಹೋಗುತ್ತದೆ. ರಾಗ ತಾಳಗಳು ಏರ್ಪಟ್ಟ ಮೇಲೆ ಸ್ವರ ಜೋಡಣೆ ಬಹು ಮಟ್ಟಿಗೆ ಅವಕ್ಕೆ ಅಧೀನವಾಗಿ ಸಾಹಿತ್ಯದ ಭಾವವನ್ನು ಸಾಧ್ಯವಾದ ಮಟ್ಟಿಗೂ ಅನುಸರಿಸಿರುತ್ತದೆ. ಹೀಗಿರುವುದರಿಂದ ಸ್ವರ ಜೋಡಣೆಯಲ್ಲಿ ಸಂಗೀತ ಶಾಸ್ತ್ರ ನಿಯಮಗಳನ್ನನುಸರಿಸಿಯೂ, ಪ್ರತಿಯೊಬ್ಬನೂ ತನ್ನ ಮನೋಧರ್ಮದಂತೆ ಸ್ವಲ್ಪಮಟ್ಟಿಗೆ ಸ್ವಾತಂತ್ರ್ಯ ವಹಿಸಿ ಸ್ವರ ನಿರ್ದೇಶ ಮಾಡಲು ಅವಕಾಶವಿದೆ. ಆದ್ದರಿಂದ, ಈ ಕೃತಿಗಳಿಗೆ ನಾನು ನಿರ್ದೇಶಿಸಿರುವ ರಾಗಗಳೇ ಕಡೆಯವು, ನಾನು ಹಾಕಿರುವ ಸ್ವರ ಪ್ರಸ್ತಾರವೇ ಖಚಿತ ಎಂಬ ಹಟ ನನಗಿಲ್ಲ. ದಾಸರ ಕೃತಿಗಳಲ್ಲಿ ಸಾಹಿತ್ಯ ಪ್ರಧಾನ, ಸಂಗೀತ ಗೌಣ; ತ್ಯಾಗರಾಜಾದಿಗಳ ಕೃತಿಗಳಲ್ಲಿ ಸಂಗೀತ ಪ್ರಧಾನ, ಸಾಹಿತ್ಯ ಗೌಣ; — ಇದನ್ನು ಬಹುಮಟ್ಟಿಗೆ ಯಾರಾದರೂ ಒಪ್ಪುವರೆಂದು ನನ್ನ ಭಾವನೆ. ಹೀಗಿದ್ದ ಮಾತ್ರಕ್ಕೇ ರಚನಾ ಪದ್ಧತಿಯ ದೃಷ್ಟಿಯಿಂದ ದಾಸರ ಪದಗಳಿಗೂ ತ್ಯಾಗರಾಜರೇ ಮುಂತಾದವರ ಕೀರ್ತನೆಗಳಿಗೂ ದೊಡ್ಡ ಭೇದವಿದೆ ಎನ್ನುವುದು ಅಷ್ಟು ಸಾಧುವಲ್ಲ. ನನ್ನ ಅಭಿಪ್ರಾಯದಲ್ಲಿ ಜನ ಬಳಕೆಯ ಹಾಡುವ ಕ್ರಮದಲ್ಲಿ ಈ ವ್ಯತ್ಯಾಸ ಹೆಚ್ಚಾಗಿ ಎದ್ದು ಕಾಣುತ್ತಿದೆಯೇ ವಿನಾ ವಾಸ್ತವವಾಗಿ ತ್ಯಾಗರಾಜರು ಮುಂತಾದವರ ಕೀರ್ತನೆಗಳ ಪ್ರಮುಖ ಅಂಗಗಳಾದ ಪಲ್ಲವಿ, ಅನುಪಲ್ಲವಿ, ಚರಣಗಳು

ದಾಸರ ಕೃತಿಗಳಲ್ಲೂ ಇದ್ದೇ ಇವೆ. ದಾಸರ ಪದಗಳ ಸಂಗೀತ ಸ್ವರೂಪ ವನ್ನು ಕಂಡುಕೊಳ್ಳಬೇಕೆಂಬುದೇ ಈ ಸಂಕಲನದ ಮುಖ್ಯ ಉದ್ದೇಶ ವಾಗಿದೆ. ಆದರೆ ದಾಸರ ಕೃತಿಗಳ ಮೂಲ ಸಂಗೀತ ಸ್ವರೂಪ ಹೇಗಿತ್ತೋ ಊಹಿಸುವುದು ಕಷ್ಟ. ಅವರ ಕೃತಿಗಳ ಸಾಹಿತ್ಯಭಾಗ ನಮಗೆ ಉಳಿದು ಬಂದಿಲ್ಲ. ಕಡೆಗೆ, ದಾಸರು ಯಾವ ಯಾವ ಪದಗಳಿಗೆ ಯಾವ ಯಾವ ರಾಗಗಳನ್ನು ಹೊಂದಿಸಿ ಹಾಡಿದರೆಂಬುದಕ್ಕೂ ಆಧಾರವಿಲ್ಲ. ಕೆಲವು ದಾಸರ ಪದಗಳನ್ನು ಕೆಲವು ನಿರ್ದಿಷ್ಟ ರಾಗಗಳಲ್ಲಿ ಹಾಡುವುದು ರೂಢಿ ಯಲ್ಲಿದೆ, ನಿಜ. ಹಾಗೆ ಮಾಡುವುದನ್ನು ರೂಢಿಗೆ ತಂದವರು ಯಾರು? ಹೇಗೆ ಹೇಳಲಾದೀತು? ನಮಗೆ ತಿಳಿದಂತೆಯೇ ದೊಡ್ಡ ದೊಡ್ಡ ವಿದ್ವಾಂ ಸರು ಕೆಲವರು ದಾಸರ ಕೃತಿಗಳನ್ನೂ ತ್ಯಾಗರಾಜರ ಕೃತಿಗಳನ್ನೂ ರೂಢಿ ಬಿಟ್ಟು ತಮಗೆ ಸೂಕ್ತ ಕಂಡ ಬೇರೆ ರಾಗಗಳಲ್ಲಿ ಹಾಡಿಲ್ಲವೇ, ಹಾಡು ತ್ತಿಲ್ಲವೇ? ಈ ರೂಢಿ ಮುಂದಿನ ಪದ್ಧತಿಯಾಗಬಹುದು. ಹೀಗೆ ರೂಢಿ ಗಳೂ ಕಾಲಕಾಲಕ್ಕೆ ಬದಲಾಯಿಸುತ್ತಿರುವುದರಿಂದ ದಾಸರು ಹಾಕಿದ ಪ್ರಾಚೀನ ಪದ್ಧತಿ ಯಾವುದು ಎಂದು ತಿಳಿಯುವ ಬಗೆ ಹೇಗೆ? ಈ ಪರಿ ಸ್ಥಿತಿಯಲ್ಲಿ ಪ್ರತಿಭಾ ಪೂರ್ಣವಾದ ದಾಸರ ಕೃತಿಗಳಿಗೆ ಸ್ವರ ಜೋಡನೆ ಮಾಡುವುದು ಸಾಹಸದ ಮತ್ತು ತೊಡಕಿನ ಕೆಲಸವಾಗಿಯೇ ಕಂಡಿತು. ಬಹುಕಾಲದ ಚಿಂತನೆ ಮತ್ತು ಪ್ರಯೋಗಗಳ ಫಲವಾಗಿ ನಾನು ಈ ನಿರ್ಧಾ ರಕ್ಕೆ ಬಂದೆ: ದಾಸರ ಪದಗಳಿಗೆ ಸಂಗೀತದ ಸ್ವರೂಪ ಕೊಡುವಲ್ಲಿ, ಶಾಸ್ತ್ರವನ್ನು ಬಿಟ್ಟು ಹೋಗದೆ, ಭಾವ ಪೋಷಣೆ ಮತ್ತು ರಂಜನ ಗುಣ—ಇವನ್ನು ಪ್ರಧಾನ ಲಕ್ಷ್ಯವಾಗಿಟ್ಟುಕೊಂಡು ಮುಂದುವರಿಯ ತಕ್ಕದ್ದು."

ಅದೇ 'ಬಿನ್ನಹ'ದ ಮೊದಲಿಗೆ ಶ್ರೀಯುತರು ಒಂದು ಕ್ಲಿಷ್ಟ ಸಮಸ್ಯೆಯ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ಕನ್ನಡ ನಾಡಿನಲ್ಲಿ ಯಾವ ಭಾಷೆಯ ಸಂಗೀತ ಪ್ರಧಾನವಾಗಿರಬೇಕೆಂಬ ವಿಷಯ ಈಚೆಗೆ ಚರ್ಚೆಯಾಗುತ್ತಿದೆ.

ಕನ್ನಡ ಜನಕ್ಕೆ ಅರ್ಥವಾಗುವ ನಾಡುನುಡಿಯಲ್ಲಿ ಅದರ ಸಂಗೀತ ಇರಬೇಕೆಂಬ ತತ್ವವನ್ನು ನಾನು ೧೯೩೬ರಲ್ಲಿ ನನ್ನ 'ವಿಶ್ವವಾಣಿ' ಪತ್ರಿಕೆ

ಯಲ್ಲಿ ಪ್ರತಿಪಾದಿಸಿದೆ. ಕನ್ನಡಿಗರಿಗೆ ಸ್ವ—ಸ್ವರೂಪಜ್ಞಾನವಾಗಬೇಕು, ಕನ್ನಡನಾಡಿನ ಕಲಾವಿಭೂತಿಗಳು ಹೇಳಹೆಸರಿಲ್ಲದೆ ಅಳಿದು ಹೋಗ ಬಾರದು ಎಂಬ ಉದ್ದೇಶದಿಂದ ವ್ಯಕ್ತವಾದ ನನ್ನ ಅಭಿಪ್ರಾಯಕ್ಕೆ, ತ್ಯಾಗ ರಾಜರ ಕೀರ್ತಿಯನ್ನು ಅಳಿಸುವ ಪ್ರಯತ್ನವೆಂಬ ಗುಲ್ಲೆದ್ದಿತು. ತ್ಯಾಗ ರಾಜರ ಕಾಲಕ್ಕೆ ಮುಂಚೆ ಕನ್ನಡನಾಡಿನಲ್ಲಿ ಸಂಗೀತವಿರಲಿಲ್ಲವೇ? ಆಗಲೂ ಜನ ತೆಲುಗು ಕೀರ್ತನೆಗಳನ್ನೇ ಹಾಡುತ್ತಿದ್ದರೇ? ನಿಜಗುಣಶಿವಯೋಗಿ ಯಿಂದ ಆರಂಭವಾದ ಹಾಡುಗಬ್ಬದ ಪರಂಪರೆ, ಪುರಂದರದಾಸರಿಂದ ಕವು ರಿದ ಸಂಗೀತಶಾಸ್ತ್ರಜ್ಞಾನ ಇಡಿಯ ದಕ್ಷಿಣ ಹಿಂದೂಸ್ಥಾನಕ್ಕೇ ಮಾದರಿ ಯಾಗಲಿಲ್ಲವೇ? ಪ್ರಾಯಶಃ, ನನ್ನ ಅಭಿಪ್ರಾಯಕ್ಕೆ ಉತ್ತರ ರೂಪವಾಗಿ ಶ್ರೀ ರಾಜಾರಾಯರು ಹೀಗೆ ನುಡಿದಿದ್ದಾರೆ: "............ಸಂಗೀತ ಪ್ರಪಂ ಚದಲ್ಲೂ ದೇಶಭಾಷೆಯಾದ ಕನ್ನಡಕ್ಕೆ ಯಾವ ಸ್ಥಾನವಿರಬೇಕು ಎಂಬು ದನ್ನು ಕಂಡು ಕೊಳ್ಳುವ ಕಾಲ ಬಂದಿದೆ. ಇದನ್ನು ನಿರ್ಧರಿಸುವಾಗ ಸಂಕುಚಿತ ಭಾವನೆಯನ್ನು ಇಟ್ಟುಕೊಳ್ಳುವುದು ಮಾತ್ರ ಸಲ್ಲದು. ಏಕೆಂದರೆ ಕರ್ನಾಟಕ ಸಂಗೀತವು ಆ ಹೆಸರು ಹೊತ್ತ ಮಾತ್ರದಿಂದ ಕನ್ನಡನಾಡಿನ ಸೊತ್ತು ಮಾತ್ರ ಅಲ್ಲ. ಅದು ತೆಲುಗರಿಗೂ ತಮಿಳರಿಗೂ ಸೇರಿದ್ದು. ಮೂವರೂ ಸೇರಿ ಅದನ್ನು ಬೆಳಸಿಕೊಂಡು ಬಂದಿದ್ದಾರೆ. ನಮ್ಮ ಶ್ರೀ ಪುರಂದರದಾಸರು ಕರ್ನಾಟಕ ಸಂಗೀತಕ್ಕೆ ಭದ್ರವಾದ, ಅಚ್ಚುಕಟ್ಟಾದ, ಶಾಶ್ವತವಾದ ತಳಪಾಯ ಹಾಕಿದ ಆದ್ಯ ಪ್ರವರ್ತಕರು, ಎನಿಸಿದ್ದರೆ, ಶ್ರೀ ತ್ಯಾಗರಾಜರು ಅದರ ಭವ್ಯವಾದ ಕಟ್ಟಡವನ್ನು ನಿರ್ಮಿಸಿ—ಇಟ್ಟಿಗೆಗಳು ತೆಲುಗಿನವರಾದರೂ—ಕರ್ನಾಟಕ ಸಂಗೀತ ಸೌಧವನ್ನು ನಿರ್ಮಿಸಿಕೊಟ್ಟಿ ದ್ದಾರೆ. ಅಲ್ಲಿಂದ ಈಚೆಗೆ ಈ ಕಲೆ ಬೆಳೆಯಲು ವಿಶೇಷವಾಗಿ ಉಪಕಾರ ಮಾಡಿರುವವರಲ್ಲಿ ಪ್ರಾಚೀನರಾದ ಶ್ರೀ ಕನಕದಾಸರು, ಶ್ರೀ ಜಗನ್ನಾಥ ದಾಸರು, ಶ್ರೀ ವಿಜಯದಾಸರು ಮುಂತಾದವರ ಮತ್ತು ಆಧುನಿಕರಾಗಿ ಶ್ರೀ ತ್ಯಾಗರಾಜರ ಸಮಕಾಲೀನರಾದ ಶ್ರೀ ಮುತ್ತುಸ್ವಾಮಿ ದೀಕ್ಷಿತರು, ಶ್ರೀ ಶ್ಯಾಮಶಾಸ್ತ್ರಿಗಳು, ಶ್ರೀ ಮೈಸೂರು ಸದಾಶಿವರಾಯರು, ಇನ್ನೂ ಈಚಿನವರಾದ ಆಸ್ಥಾನ ವಿದ್ವಾನ್ ಸಂಗೀತ ಶಾಸ್ತ್ರರತ್ನ ಶ್ರೀ ವಾಸುದೇವಾ ಚಾರ್ಯರು, ಆಸ್ಥಾನ ವಿದ್ವಾನ್ ಗಾನವಿಶಾರದ ಶ್ರೀ ಬಿಡಾರಂ ಕೃಷ್ಣಪ್ಪ

ನವರು, ಆಸ್ಥಾನ ವಿದ್ವಾನ್ ಸಂಗೀತರತ್ನ ಶ್ರೀ ಚಿಕ್ಕರಾಮರಾಯರು, ಆಸ್ಥಾನ ವಿದ್ವಾನ್ ಗಾಯಕ ಶಿಖಾಮಣಿ ಶ್ರೀ ಮುತ್ತಯ್ಯ ಭಾಗವತರು, ಆಸ್ಥಾನ ವಿದ್ವಾನ್ ಬಿ. ದೇವೇಂದ್ರಪ್ಪನವರು, ಸಂಗೀತ ವಿದ್ವಾನ್ ಶ್ರೀ ಡಿ. ಸುಬ್ಬರಾಮಯ್ಯನವರು ಮುಂತಾದ ಹಿರಿಯ ವ್ಯಕ್ತಿಗಳನ್ನು ಮರೆಯುವಂತಿಲ್ಲ. ಹೀಗಿರುವುದರಿಂದ ನಮ್ಮ ದೇಶದಲ್ಲಿ ನಡೆಯುವ ಸಂಗೀತ ಕಛೇರಿಗಳಲ್ಲಾಗಲಿ, ಸಂಗೀತ ಶಿಕ್ಷಣದಲ್ಲಾಗಲಿ ಸಂಪೂರ್ಣ ತಾಯಿ ನುಡಿಯ ಕೃತಿಗಳಿಗೆ ಮಾತ್ರವೇ ಪ್ರಾಧಾನ್ಯ ಕೊಡಬೇಕೆಂಬುದನ್ನು ಕರ್ನಾಟಕ ಸಂಗೀತದ ಇತಿಹಾಸವನ್ನು ಬಲ್ಲವರೂ ಅದರ ಏಳಿಗೆಯಲ್ಲಿ ಆಸಕ್ತಿಯುಳ್ಳವರೂ ಬಹುಶಃ ಒಪ್ಪಲಾರರು. ಆದರೂ ದಾಸರ ಪದಗಳಂತಹ ದೊಡ್ಡ ಆಸ್ತಿಯನ್ನು ಇಟ್ಟುಕೊಂಡಿರುವ ಕನ್ನಡಿಗರಾದ ನಾವು ಸಂಗೀತದಲ್ಲಿ ಕನ್ನಡಕ್ಕೆ ಸರ್ವಮುಖ್ಯತೆ ಅಲ್ಲದಿದ್ದರೂ ಪ್ರಾಮುಖ್ಯತೆ ಕೊಡಬೇಕಾದುದು ನಮ್ಮ ಕರ್ತವ್ಯವೆಂದು ನಾನು ಭಾವಿಸುತ್ತೇನೆ.

ಈ ವಾದದ ಮುಖ್ಯಕಾರಣ ಕನ್ನಡ ಸಂಗೀತ ವಿದ್ವಾಂಸರಲ್ಲಿ ರಕ್ತಗತವಾಗಿ ಮೂಡಿರುವ ತ್ಯಾಗರಾಜ ಆರಾಧನೆ. ಕನ್ನಡ ಜನತೆಯ ಸಂಸ್ಕೃತಿಗನುಗುಣವಾದ ಸಂಗೀತ ಜನತೆಯ ಭಾಷೆಯಲ್ಲಿ ಬೇಕೆನ್ನುವ ವಾದ ತ್ಯಾಗರಾಜರಿಗೆ ಅಪಮಾನವೆಸಗಿದಂತೆ ಎಂಬ ತಪ್ಪು ಕಲ್ಪನೆ. ಕನ್ನಡ ನಾಡಿನಲ್ಲಿಯೇ ಕನ್ನಡ ಪದಗಳಿಗೆ 'ಸರ್ವ ಮುಖ್ಯತೆ' ದೊರೆಯದಿದ್ದರೆ ಬೇರೆ ಎಲ್ಲಿ ದೊರೆಯಬೇಕು? ಕನ್ನಡ ಸಂಗೀತದ ವಿದ್ವಾಂಸರು ತ್ಯಾಗರಾಜಾದಿಗಳ ತೆಲುಗು ಕೀರ್ತನೆಗಳ ಅಸ್ತಿತ್ವವನ್ನು ಉಳಿಸಲು ಯತ್ನಿಸುತ್ತಿರುವಂತೆ ಕನ್ನಡ ಕೃತಿಗಳನ್ನು—ಅಥವಾ ಬೇರೆ ಭಾಷೆಯ ಕೃತಿಗಳ ಪ್ರಸಾರವನ್ನು ಬಂಗಾಳಿಗಳು, ಮರಾಟಿಗರು, ತೆಲುಗರು, ತಮಿಳರು, ಕೈಗೊಂಡಿದ್ದಾರೆಯೇ ವಿಚಾರಮಾಡಬೇಕು. ಕನ್ನಡ ಜನಗಳ ಮುಂದಿರುವ ಗುರಿ ತ್ಯಾಗರಾಜಾದಿಗಳ ರಕ್ಷಣೆ ಪೋಷಣೆಯಲ್ಲ—ಕನ್ನಡ ಜನತೆಯ ಉದ್ಧಾರ. ಇದಕ್ಕಾಗಿ ತ್ಯಾಗರಾಜಾದಿಗಳ ಕೃತಿಗಳ ಬಲಿದಾನವನ್ನರ್ಪಿಸಬೇಕಾದಲ್ಲಿ ಅರ್ಪಿಸಲೇ ಬೇಕು. ಕನ್ನಡನಾಡು ತನ್ನ ಮಕ್ಕಳಿಂದ ಏಕಮುಖ ಭಕ್ತಿ

ಯನ್ನು ನಿರೀಕ್ಷಿಸುತ್ತಿದೆ. ಕಲೆಯ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಇಬ್ಬಗೆಯ ಭಕ್ತಿ ಸಾಧ್ಯವಿಲ್ಲ—ಅಗತ್ಯವೂ ಇಲ್ಲ.

ಕನ್ನಡ ಸಂಗೀತ ನೂತನ ಮಾರ್ಗವನ್ನು ಹೇಗೆ ಆವಿಷ್ಕಾರಮಾಡಿಕೊಳ್ಳಬಹುದೆಂಬುದನ್ನು ತೋರಿಸಿಕೊಡಬಲ್ಲವರಲ್ಲಿ ರಾಜಾರಾಯರೂ ಒಬ್ಬರು. ಅವರೂ, ಇತರ ಕನ್ನಡ ಸಂಗೀತ ವಿದ್ವಾಂಸರೂ ಈ ಮಹತ್ಕಾರ್ಯ ಸಾಧನೆಗೆ ಕಂಕಣತೊಟ್ಟು ನಿಲ್ಲಬೇಕು.

ಸ್ವಸ್ವರೂಪಜ್ಞಾನ ಕಂಡುಕೊಂಡ ಕನ್ನಡನಾಡು ತ್ಯಾಗರಾಜರು, ದೀಕ್ಷಿತರು, ತಾನಸೇನ್, ಸದಾರಂಗ ಇವರ ಸಂಗೀತ ಮಾಧುರ್ಯವನ್ನು ಸವಿದರೆ ಚೆನ್ನು. ಹಾಗಿಲ್ಲದೆ ನಿಸ್ಸಹಾಯರಾಗಿ ಅವುಗಳಿಗೇ ಜೋತು ಬಿದ್ದರೆ ಅದು ದಾಸ್ಯದ ಚಿನ್ಹವಾಗುತ್ತದೆ.

ರಾಜಾರಾಯರು ಸ್ಪಷ್ಟವಾಗಿ ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದಾರೆ. ಕನ್ನಡ ಸಂಗೀತದ ಪುನರುದ್ಧಾರಕ್ಕೆ ಅವರು ಸೇವೆಮಾಡಿರುವರಾದ್ದರಿಂದ ಅವರ ಅಭಿಪ್ರಾಯವನ್ನು ನಾವು ಗೌರವಿಸಬೇಕಾಗುತ್ತದೆ. ಕನ್ನಡ ಜನತೆಯ ಆಸೆ ಆಶಯಗಳನ್ನರಿತು ಅವರು ಅಭಿಪ್ರಾಯವನ್ನು ತಿದ್ದಿಕೊಂಡರೆ ನಾಡಿಗೆ ಹಿತ.

ರಾಜಾರಾಯರು ಸಂಗೀತದಲ್ಲೆಷ್ಟು ಪಾರಂಗತರೋ ಅಭಿನಯ ಕಲೆಯಲ್ಲಿಯೂ ಅಷ್ಟೇ ಪಾರಂಗತರು. ಇವರು ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಓದುತ್ತಿದ್ದಾಗ ಅನೇಕ ನಾಟಕಗಳಲ್ಲಿ ಪಾತ್ರವಹಿಸಿ ಉತ್ತಮ ನಟರೆಂದು ಖ್ಯಾತಿ ಗಳಿಸಿದ್ದಾರೆ. ನನ್ನ 'ಮದುವೆಯೋ ಮನೆಹಾಳೋ' ನಾಟಕದಲ್ಲಿ 'ಬೋರ'ನ ಪಾತ್ರವನ್ನು ಅದ್ವಿತೀಯವಾಗಿ ಅಭಿನಯಿಸುತ್ತಿದ್ದರು. ಪಿಗಡ ವಿಕ್ರಮರಾಯ, ಚಂದ್ರಹಾಸ ನಾಟಕಗಳಲ್ಲಿ ಪ್ರಧಾನ ಪಾತ್ರ ವಹಿಸಿದ್ದರು. ಈಚೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ನಾಟ್ಯ ಶಾಖೆಯ ಚಟುವಟಿಕೆಗಳಲ್ಲಿ ಭಾಗ ವಹಿಸುತ್ತಿದ್ದಾರೆ. ನನ್ನ 'ಪಾಲು' ನಾಟಕದಲ್ಲಿ 'ಕೆಂಚ'ನ ಪಾತ್ರವನ್ನು ರಸವತ್ತವಾಗಿ ಚಿತ್ರಿಸಿ, ಗ್ರಾಮ್ಯ ವ್ಯಕ್ತಿಗಳನ್ನು ಚಿತ್ರಿಸುವ ತಮ್ಮ ಸಾಮರ್ಥ್ಯವನ್ನು ಪ್ರಕಾಶಪಡಿಸಿದರು.

ವಿದ್ಯೈ, ಕಲಾನೈಪುಣ್ಯ, ಸಂಸ್ಕೃತಿ, ಸೌಜನ್ಯಗಳೆಲ್ಲದರಿಂದ ರಾಜಾರಾಯರು ಜನತೆಯ ಪ್ರೇಮಾದರಗಳಿಗೆ ಪಾತ್ರರಾಗಿದ್ದಾರೆ. ಇವರ ಕಲೆ ಇತೋಽಪ್ಯತಿಶಯವಾಗಿ ಬೆಳೆದು, ಕನ್ನಡ ನಾಡಿನ ಪುನರುದ್ಧಾರಕ್ಕೆ ನೆರವಾಗಲಿ ಎಂದು ಹಾರೈಕೆ.

೫ – ೪ – ೧೯೪೬

---

## ೧೩. ಶಂಕರ ಜೋಶಿ

'ಮೂಗಿಲ್ಲದವರ ಊರಿನಲ್ಲಿ ಮೊಂಡು ಮೂಗಿನವನೇ ರಾಜ' ಎಂದು ಒಂದು ಗಾದೆಯಿದೆ. ಬೆಂಗಳೂರಿನಂತಹ ಸಾಂಸ್ಕೃತಿಕ ಕೇಂದ್ರದಲ್ಲಿ ಹಿಂದೂಸ್ಥಾನಿ ಸಂಗೀತದ ಸ್ಥಿತಿಗೆ ಈ ಗಾದೆ ಅಕ್ಷರಶಃ ಅನ್ವಯಿಸುತ್ತದೆ. ಉತ್ತರ ಕರ್ನಾಟಕದ ಕೀರ್ತನಕಾರರ ಹಿಂದೆ 'ಪೇಟಿ' ಬಾರಿಸುತ್ತಿದ್ದವರು, ಉತ್ತರ ಕರ್ನಾಟಕದ ಹಾಗೂ ಮಹಾರಾಷ್ಟ್ರ ನಾಟಕದ ಕಂಪೆನಿಗಳಲ್ಲಿ 'ಪಿಯಾನೊ' ಬಾರಿಸುತ್ತಿದ್ದವರು ಬೆಂಗಳೂರಿನಲ್ಲಿ ಪ್ರಸಿದ್ಧ 'ಗವಯ್' ಗಳಾಗಿದ್ದಾರೆ. ಮೂರು ತಿಂಗಳಲ್ಲಿ ಮೂವತ್ತು ರಾಗಗಳನ್ನು ಹಾಡುವ ಶಿಷ್ಯಕೋಟಿಯನ್ನು ನಿರ್ಮಾಣ ಮಾಡುವುದರಲ್ಲಿ ಈ ಗವಯ್‌ಗಳು ದಕ್ಷರಾಗಿದ್ದಾರೆ.

ನನ್ನ ಪರಮ ಮಿತ್ರರಾದ ಶ್ರೀ ದ. ಕೃ. ಭಾರದ್ವಾಜರವರು ಒಂದು ಸಂದರ್ಭದಲ್ಲಿ ಶ್ರೀ ಶಂಕರ ಜೋಶಿಯವರ ವಿಚಾರ ಪ್ರಸ್ತಾಪಿಸಿ, ಅವರು ಉತ್ತಮ ಗಾಯಕರೆಂದು ತಿಳಿಸಿದರು. ಬೆಂಗಳೂರು ಗವಯ್‌ಗಳ ಬಗ್ಗೆ ನನ್ನ ಸ್ಪಷ್ಟ ಅಭಿಪ್ರಾಯವನ್ನು ತಿಳಿಸಿ 'ಅವರ ಗುಂಪಿಗೆ ಇನ್ನೊಬ್ಬರು ಕೂಡಿದ ಹಾಗಾಯಿತು' ಎಂದೆ. ದ. ಕೃ. ಭಾರದ್ವಾಜರು ಸ್ವಲ್ಪ ಬೇಸತ್ತಂತೆ ಕಂಡು ಬಂತು.

"ಇವರನ್ನು ಒಮ್ಮೆ ಕೇಳಿನೋಡಿ—ಅನಂತರ ನಿಮ್ಮ ಅಭಿಪ್ರಾಯ ತಿಳಿಸಿ"

ಎಂದರು. ಆಗಲೆಂದೆ.



ಶಂಕರ ಜೋಶಿ

[ಪುಟ ೯೦

ಒಂದು ದಿನ ಪಂಡಿತ ತಾರಾನಾಥರನ್ನು ಕಾಣಲು ಹೋಗಿದ್ದಾಗ ಒಳಗಿನಿಂದ ಸಂಗೀತದ ತಾನವಿತಾನಗಳು ಕೇಳಿಬರುತ್ತಿದ್ದವು. ಒಂದು ಎಳೆಯ ದನಿ, ಇನ್ನೊಂದು ನುರಿತ ದನಿ.

"ಯಾರು ಪಾಠ ಹೇಳುತ್ತಿರುವವರು" ಎಂದೆ.

ತಾರಾನಾಥರು

"ನನ್ನ ಮಗನಿಗೆ ಶಂಕರ ಜೋಶಿಯವರು ಪಾಠ ಹೇಳುತ್ತಿದ್ದಾರೆ"

"ಹೇಗೆ—ಪರವಾಯಿಲ್ಲವೋ ?"

"ಉಚ್ಚ ದರ್ಜೆ. ಶಾಸ್ತ್ರಭಾಗ ಬಹಳ ಚೆನ್ನಾಗಿ ಗೊತ್ತಿದೆ. ತಾವೂ ಚೆನ್ನಾಗಿ ಹಾಡಬಲ್ಲರು."

ಎಂದರು. ಸಂಗೀತ ಶಾಸ್ತ್ರ, ಕಲೆಗಳೆರಡರಲ್ಲಿಯೂ ಮಹಾವಿದ್ವಾಂಸರಾದ ತಾರಾನಾಥರ ಬಾಯಿಂದ ಈ ಮಾತುಗಳು ಹೊರಟಾಗ ಶಂಕರರಾಯರು ವಶಿಷ್ಠನ ಕೈಯಲ್ಲಿ 'ಬ್ರಹ್ಮರ್ಷಿ' ಎನಿಸಿಕೊಂಡರು ಎಂದು ತಿಳಿದೆ. ನಾನು ಕೇಳಿದ್ದ ಚೂರುಪಾರು ಸಂಗೀತವೂ ಈ ಭಾವನೆಗೆ ಇಂಬುಕೊಟ್ಟಿತು.

ಕೆಲವು ತಿಂಗಳಾನಂತರ ಶಂಕರರಾಯರ 'ಜಲಸಾ' ಕೇಳುವ ಸುಸಂಧಿ ದೊರೆಯಿತು. ನಾಲ್ಕು ತಾಸು ಅಚ್ಚಳಿಯದೆ, ವಿಕಾರವಾದ ಹಾವಭಾವಗಳನ್ನು ಮಾಡದೆ ಗಂಭೀರವಾಗಿ, ಶುದ್ಧವಾಗಿ ರಸಭರಿತವಾಗಿ ಅವರು ಹಾಡಿದುದನ್ನು ಕೇಳಿ ಸಂತೋಷಿಸಿದೆ.

ಶಂಕರ ಜೋಶಿ ಅವರು ಹಾವೇರಿ ಹತ್ತಿರವಿರುವ ದೇವಗಿರಿಯವರು. ಇವರ ತಂದೆ ಸದಾಶಿವಜೋಶಿಯವರು ಮೈಸೂರಿನಲ್ಲಿ ರೆವಿನ್ಯೂ ಖಾತೆಯಲ್ಲಿ ನೌಕರಿಯಲ್ಲಿದ್ದರು. ಶಂಕರರಾಯರ ಹಿರಿಯರು ಯಾರೂ ಸಂಗೀತ ವಿದ್ವಾಂಸರಾಗಿರಲಿಲ್ಲ. ಆದರೆ ಅವರ ದೊಡ್ಡಪ್ಪ, ಚಿಕ್ಕಪ್ಪಂದಿರು ಸಂಗೀತ ಪ್ರೇಮಿಗಳಾಗಿದ್ದರು. ಶಂಕರರಾಯರನ್ನು ಸ್ಕೂಲಿಗೆ ಹಾಕಿದರು. ಕೆಳಗಿನ ಈಯತ್ತೆಗಳನ್ನು ದಾಟಿದುದಾಯಿತು. ಮುಂದೆ ಶಾಲಾ ಶಿಕ್ಷಣ ಹಿಡಿಯಲಿಲ್ಲ—ನಡೆಯಲೂ ಇಲ್ಲ. ಅವರ ಸೋದರ ಮಾವಂದಿರಾದ ಶಂಕರ ದೀಕ್ಷಿತರು ಕುಮಾರ ಜೋಶಿಯನ್ನು ತಮ್ಮ ಬಳಿ ಇಟ್ಟುಕೊಂಡು ಸಂಗೀತ ಕಲಿಸಲಾರಂಭಿಸಿದರು.

ಶಂಕರ ದೀಕ್ಷಿತರು ಸಂಗೀತ, ಸಂಸ್ಕೃತಗಳಲ್ಲಿ ಪಂಡಿತರು. ವಿದ್ವತ್ಪೂರ್ಣ ಗಾಯನದ ಪ್ರತಿಪಾದಕರು. ಇವರು ಧಾರವಾಡದಲ್ಲಿರುವ ಪಿತ್ರೆಯವರು, ಕೀರ್ತಿಶೇಷ ಭಾಸ್ಕರ ಬೂವಾ, ಬಾಲಕೃಷ್ಣ ಬೂವಾ ಮೊದಲಾದ ಘನ ವಿದ್ವಾಂಸರ ಸೇವೆ ಶಿಶ್ರೂಷೆ ಮಾಡಿ ಸಂಗೀತ ವಿದ್ಯೆಯನ್ನು ಸಂಗ್ರಹಿಸಿದ್ದಾರೆ.

ಶಂಕರರಾಯರ ಶಿಕ್ಷಣ ೧೬ನೆಯ ವಯಸ್ಸಿನಲ್ಲಿ ಆರಂಭವಾಗಿ ೨೪ರ ವರೆಗೆ ಎಂಟು ವರ್ಷಕಾಲ ಅವ್ಯಾಹತವಾಗಿ ದೀಕ್ಷಿತರಲ್ಲಿ ನಡೆಯಿತು. ಭದ್ರವಾದ ಶಾಸ್ತ್ರದ ಬುನಾದಿ ದೊರೆತುದಲ್ಲದೆ, ಪ್ರತಿಭೆಯ ಪ್ರಚೋದನಕ್ಕೆ ಅವಕಾಶ ದೊರೆಯಿತು. ಶಿಕ್ಷಣಭಾಗ ಸಂಗೀತದಲ್ಲಿ ಒಂದಂಶ ಮಾತ್ರ. ಮುಂದೆ ವಿದ್ಯಾಪೇಕ್ಷಿಯಾದವನು ಹಲವು ಮಹನೀಯರಲ್ಲಿ ಹಲವು ವಿಷಯಗಳನ್ನು ಸಂಗ್ರಹಿಸಬೇಕಾಗುತ್ತದೆ. ವಿವಿಧ ವಿದ್ವಾಂಸರ ಹಾಡಿಕೆಯನ್ನು ಕೇಳಿ ಅವರ ರೀತಿಯನ್ನು ತಿಳಿದುಕೊಳ್ಳಬೇಕಾಗುತ್ತದೆ. ಶಂಕರರಾಯರು ಊರು ಊರು ಸುತ್ತಾಡಿ ಸಂಗ್ರಹ ಕೆಲಸವನ್ನು ನಿರ್ವಹಿಸಿದರು. ಕರ್ನಾಟಕದ ಎಲ್ಲ ಭಾಗಗಳನ್ನು ಸಂಚರಿಸಿ ಹಾಡಿ ಜನಗಳನ್ನು ತಣಿಸಿದರು.

ಶಂಕರರಾಯರ ಸಂಗೀತ ಕೇಳಿದವರಿಗೆ "ಇಷ್ಟು ಚೆನ್ನಾಗಿ ಹಾಡುತ್ತಾರಲ್ಲಾ. ಇವರ ಹೆಸರೇತಕ್ಕೆ ಪ್ರಸಿದ್ಧವಾಗಿಲ್ಲ" ಎಂದೆನಿಸದಿರದು. ಇದಕ್ಕೆ ಕಾರಣ ಅವರ ಅತಿ ಸಂಕೋಚ ಸ್ವಭಾವ. ಏನೂ ಸಂಪತ್ತಿಲ್ಲದೆ 'ಪ್ರಸಿದ್ಧ ಗವಯ್'ಗಳೆಂದು ಮೆರೆಯುವ ಜನ ಕಂಡು ಕಂಡಲ್ಲಿ ಸಿಗುವಾಗ ಶಂಕರರಾಯರಂತಹ ವಿದ್ಯಾ, ವಿನಯಸಂಪನ್ನರನ್ನು ಕಾಣುವುದು ದುರ್ಲಭ.

ಒಮ್ಮೆ ಇವರ ಬಗ್ಗೆ ಏನಾದರೂ ಬರೆಯಬೇಕೆಂದು ನಿರ್ಧರಿಸಿ ಮಗನನ್ನು ಜತೆಹಾಕಿ ಶಂಕರರಾಯರನ್ನು ದ. ಕೃ. ಭಾರದ್ವಾಜರವರು ಒಂದು ಛಾಯಾ ಚಿತ್ರಗ್ರಹಣಶಾಲೆಗೆ ಕಳಿಸಿಕೊಟ್ಟರಂತೆ. ಸ್ಟುಡಿಯೋ ಬಾಗಿಲುತನಕ ಹೋದ ಶಂಕರರಾಯರು "ಬೇಡ ಬಿಡಪ್ಪ ಇವೆಲ್ಲಾ ಯಾಕೆ" ಎಂದು ಹಿಂದಿರುಗಿದರಂತೆ. ಮುಂದೆ ದ. ಕೃ. ಭಾರದ್ವಾಜರು ಕೋಪಿಸಿಕೊಂಡಾರೆಂದು, ಅವರನ್ನು ಕಾಣುವುದನ್ನೇ ಬಿಟ್ಟುಬಿಟ್ಟರಂತೆ. ತಾವಾಗಿ ಮುಂದುವರಿದು ಜನಗಳನ್ನು ಆಶ್ರಯಿಸಿ, ತಮ್ಮ ಪ್ರಭಾವವನ್ನು ಬೆಳಸಿಕೊಳ್ಳುವ ಮನೋಭಾವಕ್ಕೆ ಶಂಕರರಾಯರು ಬಹಳದೂರ.

ಪರಿಚಯಲೇಖನಕ್ಕೆ ನಾಲ್ಕು ವಿಷಯಗಳನ್ನು ಸಂಗ್ರಹಿಸಲು ಇವರನ್ನು ಕಂಡು ನಾನು ಮಾತನಾಡಿದಾಗ ಸಂಪೂರ್ಣ ನಿರಾಶೆಯಾಯಿತು. ತಾವಾಗಿಯೇ ಯಾವುದನ್ನೂ ತಿಳಿಸಲೊಲ್ಲರು. ನಾನು ಕೇಳಿದ ಕೆಲವು ಪ್ರಶ್ನೆಗಳಿಗೆ ದೊರೆತ ಉತ್ತರಗಳನ್ನು ಸಂಗ್ರಹಿಸಿದ್ದೇನೆ.

" ನಿಮ್ಮ ಪ್ರಿಯವಾದ ರಾಗಗಳಾವುವು ? "

" ಬಹಳ ಕಷ್ಟ ಹೇಳುವುದು. ಎಲ್ಲ ರಾಗಗಳೂ ನನಗೆ ಪ್ರಿಯ. "

" ಯಾವ ರಾಗವನ್ನು ತುಂಬಿ ಹಾಡುತ್ತೇನೆಂದು ನಿಮಗೇ ಭಾಸವಾಗುತ್ತದೆ.

" ಸಂಗೀತದಲ್ಲಿ ನಾನೊಂದು ಶಿಶು. ಒಂದೊಂದು ರಾಗವನ್ನು ಸರಿಯಾಗಿ ಸಾಧಿಸಬೇಕಾದರೆ ಒಂದೊಂದು ಜೀವಮಾನವೇ ಬೇಕು. "

" ಹೋಗಲಿ ನೀವು ಹಾಡುವ ಅಪರೂಪ ರಾಗಗಳಾವುವು ತಿಳಿಸಿ. "

" ಜಯತ ಮಲ್ಹಾರ, ಚಂಪಕ್, ಮಾಲಗುಂಜಿ, ಶ್ರೀ. "

" ನೀವು ಮಾನಿಸುವ ಹಿಂದೂಸ್ಥಾನಿ ಪದ್ಧತಿಯ ಗಾಯಕರು ಯಾರು ? "

" ಸವಾಯ್ ಗಂಧರ್ವರು, ಫಯಾಜ್ ಖಾನರು, ವಝೆ ಬೂವಾ, ಜಗನ್ನಾಥ ಬೂವಾ. ಸವಾಯ್ ಗಂಧರ್ವರ ಗಾಯನವೆಂದರೆ ನನಗೊಂದು ಹುಚ್ಚು. ಕೆಲವು ಕಾಲ ಅವರ ಹಿಂದೆ ಕುಳಿತು ಹಾಡಿದ್ದೇನೆ. "

" ಮಲ್ಲಿಕಾರ್ಜುನ ಮನ್‌ಸೂರ್ ಅವರನ್ನು ಕೇಳಿರುವಿರಾ ? "

" ಕೇಳಿದ್ದೇನೆ. ಸೊಗಸಾಗಿ ಹಾಡುತ್ತಾರೆ. ಅದ್ಭುತ ತಯಾರಿ. "

" ನಿಮ್ಮ ಸಂಗೀತ ಜೀವನದಲ್ಲಿ ನಡೆದ ಘಟನೆಗಳು ಏನಾದರೂ ಇದ್ದರೆ ಹೇಳಿ. "

" ಅಂತಹ ಹೇಳಿಕೊಳ್ಳುವ ಘಟನೆಗಳೇನೂ ಆಗಿಲ್ಲ. ಒಮ್ಮೆ ಒಂದು ಸ್ವಾರಸ್ಯವಾದ ಪ್ರಸಂಗವಾಯಿತು. ಸವಾಯ್ ಗಂಧರ್ವರು ಶುಕ್ರವಾರ ಹಾಡುತ್ತಾರೆಂದು ನಾನು ಕುಂದಗೋಳಕ್ಕೆ ಹೋದೆ. ನನ್ನ ಗುರುಗಳಾದ ಶಂಕರ ದೀಕ್ಷಿತರೂ ಅಲ್ಲಿಗೆ ದಯಮಾಡಿಸಿದ್ದರು. ರಾಮಬೂವಾ ಅವರೂ (ಸವಾಯ್ ಗಂಧರ್ವ) ನನ್ನ ಗುರುಗಳೂ ಪರಮ ಮಿತ್ರರು. ಬೂವಾ ಅವರು ನನ್ನನ್ನು ನೋಡಿ, ಜತೆಗೆ ಕೂಡೆಂದರು. ತಂಬೂರಿ ಹಿಡಿದು

ಕುಳಿತೆ. ಬೂವಾ ಅವರು ನನಗೆ ಪರಿಚಯವಿಲ್ಲದ ಒಂದು ರಾಗವನ್ನೆತ್ತಿ ಕೊಂಡು ಬಂದು ಆವರ್ತ ಹಾಡಿ, 'ಹಾಡು' ಎಂದರು. ನಾನು ಕಕ್ಕಾವಿಕ್ಕಿ ಯಾದೆ. ಬೂವಾ ಅವರು ಬಿಡಲಿಲ್ಲ. ಅದೇ ಮಾತನ್ನು ಒತ್ತಿಯೊತ್ತಿ ಮೂರು ನಾಲ್ಕು ಸಲ ಹೇಳಿದರು. ನಾನು ದೇವರೇ ಗತಿ ಎಂದು ಅವರ ಸಂಚಾರಕ್ರಮವನ್ನನುಸರಿಸಿ ಮುಂದೆ ರಾಗ ಹಾಡಿದೆ. ಬೂವಾ ಅವರು ತುಂಬ ಸಂತೋಷಿಸಿ ನನ್ನ ಗುರುಗಳನ್ನು ಕಂಡು 'ಹುಡುಗ ಸುಟಿ ಯಾಗಿದ್ದಾನೆ. ಚೆನ್ನಾಗಿ ಅಭ್ಯಾಸಮಾಡಿಸಿ. ನಮ್ಮ ಕರ್ನಾಟಕದ ಜನ ಮುಂದಕ್ಕೆ ಬರಬೇಕು. ಬೇರೆ ಬೇರೆ ದೇಶಗಳಿಗೆ ಹೋಗಿ ಛಾಪು ಹೊಡೆದು ಬರಬೇಕು' ಎಂದರು."

"ಇನ್ನೂ ಏನಾದರೂ ಪ್ರಸಂಗಗಳು ನಡೆದಿದ್ದರೆ ಹೇಳಿ."

ಶಂಕರರಾಯರು 'ಇನ್ನೇನಿಲ್ಲ' ಎಂದರು. ಜತೆಯಲ್ಲಿದ್ದ ಚಿ. ಹರಿ "ಶಿರಹಟ್ಟಿ ವಿಷಯ ಹೇಳಿ." ಎಂದ.

"ಹೇಳಿ. ಅದನ್ನು" ಎಂದು ನಾನು ಒತ್ತಾಯಪಡಿಸಿದೆ.

ಶಂಕರರಾಯರು ಗೊಣಗುಟ್ಟುತ್ತಾ

"ಒಮ್ಮೆ ಶಿರಹಟ್ಟಿಗೆ ಸಂಗೀತಕ್ಕಾಗಿ ಕರೆಬಂತು. ಅಲ್ಲಿ ಒಬ್ಬರು ಪ್ರಸಿದ್ಧ ತಬಲ್‌ಜೀಯವರಿದ್ದಾರೆ. ಅವರಿಗಿಂತ ಅವರ ಶಿಷ್ಯಕೋಟಿ ಪ್ರಬಲ. ಸಂಗೀತಗಾರರು ಯಾರು ಬಂದರೂ ಅವರನ್ನು ಅವಹೇಳನ ಮಾಡುವುದೇ ಅವರ ಕೆಲಸವಾಗಿತ್ತು. ನನ್ನ ಗಾನಕ್ಕೆ ಪ್ರಸಿದ್ಧ ತಬಲ್‌ಜೀ ಯವರ ಮಗನೇ ಕುಳಿತ. ಅವನೂ ಸಾಕಷ್ಟು ಗರ್ವಿಷ್ಠ. ಈ ತೇಜೋ ವಧಕರಿಗೆ ಬುದ್ಧಿ ಕಲಿಸಬೇಕೆಂದು ನಾನು ವಕ್ರಸಂಚಾರವನ್ನಾರಂಭಿಸಿ ಹಾಡಲು ಮೊದಲಿಟ್ಟೆ. ತಬಲ್‌ಜೀ ಗೆಳೆಯರಾದರು. ಜಲಸಾ ಸುಗಮ ವಾಯಿತು.

"ನೀವು ಕನ್ನಡ ಪದಗಳನ್ನು ಹಾಡುತ್ತೀರಾ?"

"ಹಾಡುತ್ತೇನೆ. ನನ್ನ ಗುರುಗಳು ನೂರಾರು ಹಾಡುಗಳನ್ನು ಕಟ್ಟಿದ್ದಾರೆ. ಅವುಗಳಲ್ಲಿ ಕೆಲವನ್ನು ನಾನು ಹಾಡುತ್ತೇನೆ."

"ಕರ್ನಾಟಕದಲ್ಲಿ ಹಾಡುವಾಗ ಕನ್ನಡ ಪದಗಳನ್ನೇ ಏತಕ್ಕೆ ಹಾಡಬಾರದು."

" ಹಾಡಬಹುದು. ಆದರೆ ವೈವಿಧ್ಯ ಬರುವುದಿಲ್ಲ. ಸಂಗೀತ, ಸಾಹಿತ್ಯ ಬಲ್ಲವರು ಬೇರೆ ಬೇರೆ ಚೀಸ್ಸುಗಳನ್ನು ಮಾಡಿಕೊಟ್ಟರೆ ನಾವು ಹಾಡಬಹುದು. "

" ಕರ್ನಾಟಕ, ಹಿಂದೂಸ್ಥಾನಿ ಪದ್ಧತಿಗಳಲ್ಲಿರುವ ವ್ಯತ್ಯಾಸವೇನು ? "

" ಕರ್ನಾಟಕ ಪದ್ಧತಿಯಲ್ಲಿ ವಾದಿ—ಸಂವಾದಿಗಳ ಕಡೆ ಲಕ್ಷ್ಯವಿಲ್ಲ. ಅವರು ಸ್ವರ ಪ್ರಸ್ತಾರಕ್ಕೆ ಅತಿ ಮಹತ್ವ ಕೊಡುವುದರಿಂದ ಸಂಗೀತದ ರಸ ಭಾಗಕ್ಕೆ ಕುಂದುಂಟಾಗುತ್ತದೆ. ಅಕಾರದಲ್ಲಿ ರಸಪೋಷಣೆ ಕೂಡುತ್ತದೆ. ಅದನ್ನೇ ಸ್ಪಷ್ಟವಾಗಿ ಸ್ವರವಾಗಿ ಹೇಳಿದರೆ ಅದು ವ್ಯಾಕರಣವಾಗಿಬಿಡುತ್ತದೆ. ಆದರೆ ಶಾಸ್ತ್ರ ಒಂದೇ—ಕರ್ನಾಟಕ ಪದ್ಧತಿಯಲ್ಲಿ ಅಭೂತಪೂರ್ವ ಕಳೆಗಳಿವೆ. ವೈವಿಧ್ಯವಿದೆ. ಹಾಡುವವರು ರಸಪೋಷಣೆಯ ಕಡೆಗೆ ಹೆಚ್ಚು ಗಮನಕೊಟ್ಟಲ್ಲಿ ಅದು ಉತ್ತರದವರಿಗೂ ಪ್ರಿಯವಾಗುತ್ತದೆ. "

" ಮುಂದೆ ನೀವು ಏನು ಮಾಡಬೇಕೆಂದಿರುವಿರಿ ? "

" ಹೇಳಿ ಏನು ಪ್ರಯೋಜನ. ಕರ್ನಾಟಕದಲ್ಲಿ ಯಾವದಕ್ಕೂ ಅವಕಾಶವಿಲ್ಲ, ಪ್ರೋತ್ಸಾಹವಿಲ್ಲ. "

" ಇರಲಿ ಹೇಳಿ. "

" ಸರಿಯಾದ ಪದ್ಧತಿಯಲ್ಲಿ ಒಂದು ಶಾಲೆ ತೆರೆದು ಹತ್ತಾರು ಉತ್ತಮ ಗಾಯಕರನ್ನು ಸಿದ್ಧಮಾಡಬೇಕೆಂದಿದ್ದೇನೆ. "

" ನಾಟಕದಲ್ಲಿ ಪಾತ್ರ ವಹಿಸಿದ್ದೀರಾ. "

" ೩—೪ ವರ್ಷ ಕಂಪೆನಿಗಳಲ್ಲಿದ್ದೆ ಗುರುಸಮರ್ಥ ನಾಟಕ ಮಂಡಳಿಯಲ್ಲಿ ನಾಯಕನ ಪಾತ್ರಗಳನ್ನು ಧರಿಸುತ್ತಿದ್ದೆ. "

" ಈಗ ನಿಮ್ಮ ಶಿಷ್ಯರಲ್ಲಿ ಯಾರು ಮುಂದಿದ್ದಾರೆ. "

" ನಮ್ಮ ಭಾರದ್ವಾಜರ ಮಗ ಹರಿ. ಆರು ವರ್ಷದಿಂದ ನನ್ನಲ್ಲಿ ಕಲಿಯುತ್ತಿದ್ದಾನೆ. ಅವನ ಶ್ರದ್ಧಾಭಕ್ತಿಗಳೇ ಅವನಿಗೆ ವಿದ್ಯೆಯನ್ನು ದೊರಕಿಸಿಕೊಟ್ಟವೆ. "

ಕನ್ನಡ ನಾಡಿನಲ್ಲಿ ಇಂತಹ ರತ್ನಗಳೆಷ್ಟೋ ಹುದುಗಿ ಕುಳಿತಿವೆ. ಅವುಗಳನ್ನು ಹೊರಗೆ ತೆಗೆಯಬೇಕಾದುದು ರಸಿಕರ ಕರ್ತವ್ಯ.

———

೭-೪-೪೬

# ೧೪. ನಟಶೇಖರ ಮಹಮದ್ ಪೀರ್

ನಟಭಯಂಕರ ಗಂಗಾಧರರಾಯರ ಕಂಪೆನಿ ಬೆಂಗಳೂರಿನಲ್ಲಿ ಬೀಡು ಬಿಟ್ಟಿತ್ತು. ಒಂದು ದಿನ ಅವರ ಕಂಪೆನಿ ಮನೆಗೆ (ಕಿಲಾರಿ ರಸ್ತೆಯಲ್ಲಿ) ಒಬ್ಬ ಗೆಳೆಯರು ನನ್ನನ್ನು ಕರೆದೊಯ್ದರು. ನಮ್ಮನ್ನು ಸ್ವಾಗತಿಸಿ, ಗೌರವಾದರಗಳಿಂದ ಮಾತನಾಡಿಸಿದವರು ಒಬ್ಬ ತರುಣ ನಟರು. ಕಂಪೆನಿ ಜನಗಳ ಬಾಯಲ್ಲಿ ನಾನು ಇಂಗ್ಲಿಷ್ ಕೇಳಿದ್ದು ಅದೇ ಮೊದಲು. ಸುಶಿಕ್ಷಿತ ತರುಣರಾದ ಇವರು ನಾಟಕದ ಕಂಪೆನಿ ಏತಕ್ಕೆ ಸೇರಿದರು ? ಎಂಬ ವಿಚಾರ ನನ್ನ ತಲೆ ಹೊಕ್ಕಿತು. ಆದರೆ ಅವರ ಅಭಿನಯವನ್ನು ಹಿಂದಿನ ದಿವಸ "ಕೃಷ್ಣಲೀಲಾ" ನಾಟಕದಲ್ಲಿ ನೋಡಿದ್ದೆ. ಕೃಷ್ಣನ ಪರಮಾಪ್ತ ಗೆಳೆಯ ಹುಂಬ ವಿಜಯನ ಪಾತ್ರವನ್ನು ನಿರ್ವಹಿಸಿದವರು ಮಹಮದ್ ಪೀರರೆಂಬ ಮುಸಲ್ಮಾನರು ಎಂದು ತಿಳಿದ ಮೇಲಂತೂ ಅವರ ಮೇಲಣ ವಿಶ್ವಾಸ ಇಮ್ಮಡಿಸಿತು.

ಪೀರರನ್ನು ಕೇಳಿದೆ.

"ನಾಟಕದ ಕಂಪೆನಿ ಏಕೆ ಸೇರಿದಿರಿ."

"ಶಾಲಾ ನಾಟಕಗಳಲ್ಲಿ ಪಾತ್ರ ವಹಿಸುತ್ತಿದ್ದೆ. ನನಗೆ ನಾಟಕದ ಚಟ ವಿಪರೀತ. ಶಾಲೆ ಓದು ಹೈಸ್ಕೂಲಿಗೆ ಸಾಕೆನಿಸಿತು. ರಂಗಭೂಮಿಯ ಸೇವೆ ಮಾಡಲು ಮನಸ್ಸಾಯಿತು—ಕಂಪೆನಿ ಸೇರಿದೆ."

ಎಂದು ಹೇಳಿದರು.



ಬುದ್ಧ (ಮಹಮ್ಮದ್ ಪೀರ್)

[ಪುಟ ೯೬



ದಾರಾ ಮುಹಮ್ಮದ್ ಪೀರ್

ಪುಟ ೯೭]

ನಮ್ಮ ಗೆಳೆತನಕ್ಕೆ ಅದೇ ಬೀಜಾಂಕುರ.

ಪೀರರು ನಾಟ್ಯೋಪಜೀವಿಗಳನ್ನು ಕೂಡಿದುದು ಅದೇ ಮೊದಲು. ವಿಜಯನ ಪಾತ್ರ ಒಬ್ಬ ಮುಗ್ಧ ಭಕ್ತನ ಪಾತ್ರ. ಬುದ್ಧಿಯ ಪ್ರಪಂಚಕ್ಕೆ ಹಾರದೆ ಭಕ್ತ ಪರಮಾತ್ಮನನ್ನು ಗೆಳೆಯನ ಹಾಗೆ ಕಂಡು, ಆರಾಧಿಸುವ ಭಾವ. ಈ ಸಖ್ಯಯೋಗವನ್ನು ಯಾವ ಮಟ್ಟಕ್ಕೆ ಶಿರಹಟ್ಟಿ ವೆಂಕೋಬ ರಾಯರು ತಮ್ಮ 'ಕೃಷ್ಣಲೀಲಾ' ಪ್ರದರ್ಶನಗಳಲ್ಲಿ ತಂದಿದ್ದರೆಂಬುದನ್ನು ಕಂಡಿದ್ದೆ. ವೆಂಕೋಬರಾಯರ ಕೃಪೆಯಿಂದ ಕೃಷ್ಣನ ವಿಷಯಾಸಕ್ತಿಗೆ ಗ್ರಾಸವೊದಗಿಸುವ ವೃತ್ತಿ ವಿಜಯನ ಕೊರಳಿಗೆ ಬಿದ್ದಿತ್ತು. ಅವನ ಮಾತು ಗಳು, ನಡತೆ ಎಲ್ಲ ವೇಶ್ಯಾವಾಟಗಳ ಪ್ರತೀಕ.

ಇಂತಹ ವಿಕೃತ ಪರಿಸ್ಥಿತಿಯಿಂದ ವಿಜಯನನ್ನು ಪಾರುಮಾಡಿ ಅವ ನಿಗೂ ಅವನ ಆರಾಧ್ಯದೇವ ಕೃಷ್ಣನಿಗೂ ಮಾನ ಮರ್ಯಾದೆಗಳನ್ನು ತಂದು ಕೊಟ್ಟವರು ಮುಸಲ್ಮಾನರಾದ ಮುಹಮುದ್ ಪೀರರವರು.

ಈಗ್ಗೆ ಸುಮಾರು ಕಾಲು ಶತಮಾನ ಹಿಂದೆ ಪೀರರವರು ವಿಜಯನ ಭೂಮಿಕೆಯಲ್ಲಿ ಅಭಿನಯಿಸುತ್ತಿದ್ದ ಒಂದು ದೃಶ್ಯ ಇನ್ನೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ಕೃಷ್ಣನ ಗೋಕುಲ ನಿರ್ಗಮನ. ಮಧುರೆಗೆ ಹೊರಡಲು ಕೃಷ್ಣ ಸಿದ್ಧನಾಗಿದ್ದಾನೆ. ಗೋಪಿಯರು ಅವನನ್ನು ಸುತ್ತುಗಟ್ಟಿ 'ಹೋಗ ಬೇಡ'ವೆಂದು ಅಂಗಲಾಚುತ್ತಿದ್ದಾರೆ. ದುಃಖತಪ್ತನಾದ ವಿಜಯ ಒಂದೆಡೆ ಅಳುತ್ತ ನಿಂತಿದ್ದಾನೆ. ಕೃಷ್ಣ ಅವನ ಬಳಿ ಒಂದು ನೇವರಿಸಿ, ಅಪ್ಪಿ ಸಮಾಧಾನಮಾಡುತ್ತಾನೆ. ಆ ಸನ್ನಿವೇಶದಲ್ಲಿ ವಿಜಯ ತನ್ನ ಭಕ್ತಿ ಪ್ರೇಮಗಳನ್ನು ನಿರ್ವ್ಯಾಜ ರೀತಿಯಲ್ಲಿ ಪ್ರಭುವಿನ ಪಾದಕ್ಕೆ ಒಪ್ಪಿಸುವ ರೀತಿ ಪೀರರ ಅಭಿನಯದ ರಸಸಿದ್ಧಿಯನ್ನು ಕಾಣಿಸುತ್ತಿತ್ತು. ಕಲ್ಲೆದೆಯ ಪ್ರೇಕ್ಷಕ ಕೂಡ ಮಗುವಿನಂತೆ ಕಂಬನಿಗರೆಯುತ್ತಿದ್ದ. ೧೦-೧೫ ನಿಮಿಷ ಕಾಲ ಪವಿತ್ರ ರಸಸಮುದ್ರದಲ್ಲಿ ಪೀರರು ಪ್ರೇಕ್ಷಕರನ್ನು ಮುಳುಗಿಸು ತ್ತಿದ್ದರು.

ಕೆಲವು ಕಾಲ ಪೀರರು ಅವರಿವರ ಕಂಪೆನಿ ಸೇವೆ ಮಾಡಿ ೧೯೩೦ರಲ್ಲಿ ತಮ್ಮ 'ಚಂದ್ರಕಲಾ ನಾಟಕ ಮಂಡಳಿ'ಯನ್ನು ಸ್ಥಾಪಿಸಿದರು. ಈ ವೇಳೆಗೆ ಇವರು ದ್ವಿಜೇಂದ್ರಲಾಲರಾಯರ 'ಷಹಜಹಾನ್' ನಾಟಕವನ್ನು

ಲಲಿತ ಕಲಾ ಮಂಡಳಿಯಲ್ಲಿ ಅಭಿನಯಿಸುತ್ತಿದ್ದರು. ಚಂದ್ರಕಲಾ ನಾಟಕ ಮಂಡಳಿಯಲ್ಲಿ 'ಷಹಜಹಾನ್' ನಾಟಕವೇ ಗಣಪತಿಪೂಜೆ ಮಾಡಿಸಿತು.

ಕನ್ನಡನಾಡಿನ ನಾಟ್ಯೋಪಜೀವಿ ಸಂಘಗಳ ಇತಿಹಾಸದಲ್ಲಿ 'ಷಹ-ಜಹಾನ್' ನಾಟಕ ಒಂದು ಪ್ರಧಾನ ಘಟ್ಟ. ಇಲ್ಲಿಯವರೆಗೆ ಕನ್ನಡ ರಂಗಭೂಮಿ ಮಾಲಿಕ, ನಟರು ಇವರ ಸೊತ್ತಾಗಿತ್ತು. ಪ್ರದರ್ಶನ ವೈಭವ ಮತ್ತು ನಟರ ಪ್ರತಿಭೆಯಿಂದ ಎಂತಹ ನಾಟಕವನ್ನಾದರೂ ಆಡಿ ತೋರಿಸಬಲ್ಲೆವೆಂಬ ಧೈರ್ಯ ಕಂಪೆನಿ ಜನದಲ್ಲಿತ್ತು. ವರದಾಚಾರ್ಯ ರಂತಹ ಆದರ್ಶ ನಟರೂ ಮೂರನೆಯ ನಾಲ್ಕನೆಯ ದರ್ಜೆ ನಾಟಕಗಳನ್ನು ಅಭಿನಯಿಸುತ್ತಿದ್ದರು. ಕವಿ ತನ್ನ ಸ್ವಸ್ಥಾನವನ್ನಡರಿದುದು 'ಷಹ-ಜಹಾನ್' ನಾಟಕದಲ್ಲಿ.

ದ್ವಿಜೇಂದ್ರಲಾಲರಾಯರ ನಾಟಕ ಬಂಗಾಳದಲ್ಲೆಲ್ಲಾ ಗುಡು ಗಾಡಿತ್ತು. ನಟಶ್ರೇಷ್ಠ ಶಿಶಿರ ಕುಮಾರ ಬಹದೂರಿ ಷಹಜಹಾನ್ ಪಾತ್ರ ವನ್ನು ಸೊಗಸಾಗಿ ಅಭಿನಯಿಸುತ್ತಿದ್ದರು. ಲಕ್ಷಾಂತರ ರೂಪಾಯಿಗಳನ್ನು ವ್ಯಯಮಾಡಿ ವೇಷ ಭೂಷಣಗಳು, ರಂಗೋಪಕರಣಗಳನ್ನು ಬಹಾದೂರಿ ಸಿದ್ಧಗೊಳಿಸಿದ್ದರು. ೧೯೨೦ರಲ್ಲಿ ಕಲ್ಕತ್ತೆಯಲ್ಲಿ ಬಹಾದೂರಿಯ ನಾಟಕ ನೋಡಿದ್ದ ನನಗೆ ಪೀರರು ಇದಕ್ಕೆ ಕೈ ಹಾಕುವುದು ಸಾಹಸವೆನಿಸಿತು.

ನಿಜವಾಗಿಯೂ ಅದು ಒಂದು ಮಹಾಸಾಹಸ. ಬಡತನದಲ್ಲಿ ನಡೆಯುತ್ತಿದ್ದ ಕಂಪೆನಿ—ಸರಿಯಾದ ವೇಷ ಭಾಷಣಗಳಿಲ್ಲ. ರಂಗೋಪ ಕರಣಗಳು ಏತಕ್ಕೂ ಬೇಡ. ಬಂಗಾಳಿ ಮೂಲವನ್ನು ಕನ್ನಡಕ್ಕೆ ಅನು ಷಮವಾಗಿ ಶ್ರೀ ಬಿ. ಪುಟ್ಟಸ್ವಾಮಯ್ಯನವರು ಅನುವದಿಸಿದ್ದರು. ಮೂಲದ ಭಾವ ಕೆಡದಂತೆ ಅನುವಾದಕರು ಅದೇ ಸಮಾಸ, ವಾಕ್ಯಬೃಂದಗಳನ್ನೂ ಇಟ್ಟಿದ್ದರು. ಪಾಮರರಿಗೆ—ಕಲಿತವರಿಗೆ ಕೂಡ ಸುಲಭವಾಗಿ ಅರ್ಥ ವಾಗುವ ಸಾಹಿತ್ಯವಲ್ಲ.

ಇಷ್ಟೆಲ್ಲ ಅಡಚಣೆಗಳಿದ್ದರೂ ಪೀರರು 'ಷಹಜಹಾನ್' ಕೂಡಿ ಸಿದ್ದರು. ಅವರು ದಾರನ ಭೂಮಿಕೆಯನ್ನೂ ಎಚ್. ಎಲ್. ಎನ್. ಸಿಂಹರು ಷಹಜಹಾನ್ ಭೂಮಿಕೆಯನ್ನೂ ಅಭಿನಯಿಸುತ್ತಿದ್ದರು. ನಾಟಕ ನೋಡಿದಾಗ ನನ್ನ ಮೇಲಾದ ಪರಿಣಾಮ ಅದ್ಭುತ. ಕನ್ನಡ ರಂಗ

ಭೂಮಿಯ ಮೇಲೆ ಪೀರರು ಒಂದು ಪವಾಡ ಮಾಡಿ ತೋರಿಸಿದ್ದರು. ಕೇವಲ ಸಾಹಿತ್ಯ, ನಟರ ಯೋಗ್ಯತೆಗಳನ್ನೇ ಅವಲಂಬಿಸಿ ಜನಮನವನ್ನು ಸೆರೆಹಿಡಿದಿದ್ದ ಅದ್ಭುತ ರೂಪಕ 'ಷಹಜಹಾನ್.'

'ಷಹಜಹಾನ್' ನಾಟಕದಲ್ಲಿ ಕವಿ ಎರಡು ಪಾತ್ರಗಳ ಮೇಲೆ ಸಮಭಾರ ಹೇರಿದ್ದಾನೆ. ಸಮ್ರಾಟ ಷಹ-ಜಹಾನ್–ಅವನ ನಿರ್ಭಾಗ್ಯ ಪುತ್ರ ದಾರಾ. ಸರಳ ಜೀವಿ ದಾರಾ. ಅವನಿಗೆ ತಮ್ಮನ ರಾಜ್ಯದಾಹದ ಮರ್ಮವೇ ಅರ್ಥವಾಗಲೊಲ್ಲದು. ಕುರಾನ ಪುರಾಣಗಳಲ್ಲಿ ವಿಲೀನನಾಗಿ ಪಂಡಿತರ ಉಲೇಮಾಗಳ ಸಹವಾಸದಲ್ಲಿ ಆಧ್ಯಾತ್ಮಿಕ ಜಗತ್ತಿನಲ್ಲಿ ವಿಹರಿಸುತ್ತಿದ್ದ ದಾರಾ ಅವರಿಂಗಜೇಬನ ರಾಜ್ಯಲಾಲಸೆಯನ್ನು ಕಂಡು ಕುಪಿತನಾಗುವುದಿಲ್ಲ—ಜಿಹಾಸೆ ಹೊಂದುವುದಿಲ್ಲ—ಉದಾತ್ತ ನಾಯಕನಂತೆ ಮುಗುಳ್ನಗೆ ನಗುತ್ತಾನೆ. ಅಸ್ಥಿರವಾದ ರಾಜ್ಯಕ್ಕಾಗಿ ಪಿತೃಘಾತ, ಭ್ರಾತೃಘಾತಗಳಿಗೆ ಹೇಸದಷ್ಟು ಮನಸ್ಸನ್ನು ಪಾಷಾಣ ಮಾಡುವ ಅದರ ಅಸೀಮ ರಾಕ್ಷಸೀ ಶಕ್ತಿಯನ್ನು ನೆನೆದು ದುಃಖಿಸುತ್ತಾನೆ. ದಾರನ ಪಾತ್ರ ದ್ವಿಜೇಂದ್ರಲಾಲರ ಪ್ರತಿಭೆಯಿಂದ ಪೋಷಿತವಾದಂತೆ ಕಲಾವಿದ ಪೀರರ ತೇಜಸ್ಸಿನಿಂದ ಪೂರ್ಣ ವಿಕಾಸವಾಗುತ್ತಿತ್ತು. ದಾರನ ದುರಂತ ಜೀವನವನ್ನು ಪೀರರು ಮಾರ್ಮಿಕವಾಗಿ, ಹೃದಯಂಗಮವಾಗಿ ಚಿತ್ರಿಸುತ್ತಿದ್ದರು. ಪೀರರ ಕಲಾಮಂದಿರದ ಹೆಬ್ಬಾಗಿಲು ದಾರನ ಪಾತ್ರ.

ಚಂದ್ರ ಕಲಾ ಮಂಡಳಿ ಮುಂದೆ ಅಡಿಯಿಟ್ಟಿತು. ಉತ್ತಮ ನಟರೂ ಮಂಡಳಿಯ ಆಧಾರಸ್ತಂಭದಲ್ಲಿ ಒಬ್ಬರೂ ಆದ ಶ್ರೀ ಎಚ್. ಎಲ್. ಎನ್. ಸಿಂಹರು ಬರೆದಿದ್ದ "ಸಂಸಾರನೌಕ" ರಂಗಭೂಮಿಯ ಮೇಲೆ ಬಂತು. ಪೀರರು, ತಂದೆಯ ಉಗ್ರಶಾಸನಕ್ಕೆ ಬಲಿಯಾದ ಸುಂದರನ ಪಾತ್ರವನ್ನು ನಿರ್ವಹಿಸುತ್ತಿದ್ದರು. ಬಡತನದ ದಾರುಣವೇದನೆಯನ್ನು ಪೀರರು ಕರುಳು ಕಿತ್ತುಬರುವಂತೆ ನಿರ್ವಹಿಸುತ್ತಿದ್ದರು. ಈ ನಾಟಕ ವಿಶೇಷ ಖ್ಯಾತಿ ಗಳಿಸಿತು. ಮುಂದೆ ಚಲನ ಚಿತ್ರಕ್ಕೂ ಅಳವಟ್ಟಿತು. ಆದರೆ ನಾಟಕದ ಎಲ್ಲ ಕೀರ್ತಿಗೂ ಬಾಧ್ಯರಾದ ಪೀರರು ಆ ವೇಳೆಗೆ ಪರಲೋಕವಾಸಿಗಳಾಗಿದ್ದರು.

ಪೀರರ ಪ್ರತಿಭೆಯ ದೃಷ್ಟಿಯಿಂದ ಸುಂದರನ ಪಾತ್ರಕ್ಕೆ ಹೆಚ್ಚು ಮಹತ್ವಕೊಡಬೇಕಾದದ್ದಿಲ್ಲ. ಕಥಾಸಂದರ್ಭವೇ ಶೋಕರಸವನ್ನವ ಲಂಬಿಸಿತ್ತು. ಬಡತನದ ಬೇಗೆ ಎಂಥವರ ಕಣ್ಣಲ್ಲಿಯೂ ನೀರು ತರಿಸ ತಕ್ಕುದೇ. ಸಾಧಾರಣ ನಟರೂ ಈ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸಿದ್ದುದನ್ನು ನಾನು ಕಂಡಿದ್ದೇನೆ.

ಆದರೆ ಪೀರರಿಗೆ ವಿಾಸಲಾದ ಒಂದು ನಾಟಕ ಕಾದಿತ್ತು. ಪ್ರಾಯಶಃ ಪೀರರ ದೇಹಾಕೃತಿ ಮುಖಲಕ್ಷಣಗಳೇ ನಾಟಕಕಾರರಿಗೆ ಆ ವಸ್ತುವನ್ನು ಆಯಲು ಪ್ರೇರಕವಾಗಿರಬೇಕು. ಶ್ರೀ ಬಿ. ಪುಟ್ಟಸ್ವಾಮಯ್ಯನವರು " ಗೌತಮ ಬುದ್ಧ " ನಾಟಕವನ್ನು ಬರೆದು ಪೀರರ ಕೈಯಲ್ಲಿಟ್ಟರು. ನಾಟಕ ನಾನು ನೋಡಿದಾಗ ವ್ಯಕ್ತ ಮಾಡಿದ ಅಭಿಪ್ರಾಯವನ್ನೇ ಇಲ್ಲಿ ಉದ್ಧರಿಸುತ್ತೇನೆ.

" ಕಲಾಪೂರ್ಣವಾದ ಕಾವ್ಯ ಅದನ್ನು ಯುಕ್ತ ರೀತಿಯಲ್ಲಿ ವ್ಯಾಖ್ಯಾನ ಮಾಡಬಲ್ಲ ಕಲಾವಿದ, ಸುಹೃದಯತೆಯಿಂದ ಕಾವ್ಯಪಾಕವನ್ನು ಉಪಭೋಗಿಸಬಲ್ಲ ಕಲಾಭಿಮಾನಿ—ಈ ತ್ರಿವೇಣಿ ಸಂಗಮ ಶ್ರೀ ಮಹಮದ್ ಪೀರರವರು ಅಭಿನಯಿಸುತ್ತಿರುವ " ಗೌತಮ ಬುದ್ಧ " ನಾಟಕದಲ್ಲಿ ಸಾಧಿಸಿದೆಯೆಂದರೆ ತಪ್ಪಾಗದು. ನಾಟಕ ನೂತನ ಕಲಾ ಸಂಪ್ರದಾಯವನ್ನೇ ನಿರ್ದೇಶಿಸಲು ಹೊರಟಿರುವ ಕಲಾ ಕ್ರಿಯೆ. ಜನರಂಜನೆಯ ಕೀಳುಗತಿಗಿಳಿಯದೆ ಸಾಹಿತ್ಯದ ಉಚ್ಚಗಾಂಭೀರ್ಯವನ್ನೇ ಪರಿಪೋಷಿಸಿಕೊಂಡು, ಬುದ್ಧದೇವನ ಉದಾತ್ತ ಜೀವನದ ಮಹೋನ್ನತಿಯನ್ನೇ ಧೃವತಾರೆಯನ್ನಾಗಿ ಮುಂದೆ ಇಟ್ಟುಕೊಂಡಿರುವ ಈ ನಾಟಕ ಸಾಹಿತಿಗಳಿಗೂ, ಕಲಾವಿದರಿಗೂ ಒಂದು ಹಬ್ಬ. ನಾಟಕೋಪಜೀವಿ ಸಂಘಗಳು " ಸರಳರಗಳೆ " ಯನ್ನು ಉಪಯೋಗಿಸುವಷ್ಟು ದೂರ ಈ ನಾಟಕವನ್ನೊಯ್ದಿರುವುದು ಅಭಿಮಾನಾಸ್ಪದವಾದ ಸಂಗತಿ. ನಾಟಕಕರ್ತರಾದ ಶ್ರೀ ಬಿ. ಪುಟ್ಟಸಾಮಯ್ಯನವರು ಅರಿತ ನುರಿತ ನಾಟಕಕಾರರು. ಅವರ ಶೈಲಿ—ಗದ್ಯವೇ ಆಗಲಿ ಪದ್ಯವೇ ಆಗಲಿ ಸರಳರಗಳೆಯೇ ಆಗಲಿ—ಗಂಭೀರ ಸಾಗರದಂತೆ ಹರಿಯುವ ವೀರಶೈಲಿ.

ಗೌತಮ ಬುದ್ಧದೇವನ ಜೀವನದ ಮೂರು ಅಂಕಗಳು ಇದರಲ್ಲಿ ಮೂಡಿವೆ. ಮೊದಲನೆಯದು ಸಿದ್ಧಾರ್ಥ ಸ್ಥಿತಿ, ಎರಡನೆಯದು ಸಾಧಕ ಸಿದ್ಧಾರ್ಥ, ಮೂರನೆಯದು ಬುದ್ಧದೇವ. ಅವನಿಗೆ ಹೊಂದಿಕೊಂಡಂತೆ ಇರುವ ಯಶೋಧರ, ಚೆನ್ನರು. ಅವನಿಗೆ ಪ್ರತಿಕಕ್ಷಗಳಾಗಿ ನಿಲ್ಲುವ ರತಿಮನ್ಮಥರು. ಇವರೆಲ್ಲಾ ಜೀವಂತ ಪ್ರಾಂತಗಳು. ಬುದ್ಧನನ್ನು ಬಿಟ್ಟರೆ ನಮ್ಮ ಚಿತ್ತವನ್ನು ಸೆಳೆಯುವ ವ್ಯಕ್ತಿಯೆಂದರೆ ಯಶೋಧರೆ. ಅವಳ ನಿರ್ವ್ಯಾಜ ಅಂತಃಕರಣಕ್ಕೆ, ಅಮಲ ಸತೀತ್ವಕ್ಕೆ ಸರಿಗಟ್ಟುವ ಒಂದೇ ಒಂದು ವ್ಯಕ್ತಿಯೆಂದರೆ ರಾಮಾಯಣದ ಊರ್ಮಿಳಾ. ಪ್ರಮೋದೋ ದ್ಯಾನದಲ್ಲಿ ಸಿದ್ಧಾರ್ಥನನ್ನು ನೋಡುತ್ತಾಳೆ. ಅವನು ತನ್ನೆಲ್ಲ ಗೆಳತಿಯ ರಿಗೆ ಬಹುಮಾನ ಹಂಚುವ ಹದವನ್ನೂ ನೋಡುತ್ತಾಳೆ. ತಾನು ಗೆಳತಿಯ ರಂತೆ ರತ್ನರಾಶಿಗೆ ಕೈ ನೀಡುವುದಿಲ್ಲ. ಶಾಕ್ಯವಂಶದ ಔದಾರ್ಯವನ್ನು ನೋಡಿ ಆ ವಂಶ, ಅದರ ಔದಾರ್ಯ ಎಂದೆಂದಿಗೂ ವರ್ಧಿಸಲಿ ಎಂದು ಕೋರುತ್ತಾಳೆ. ಈ ನಿರಸನವೇ, ಈ ಪರಹಿತದೃಷ್ಟಿಯೇ ಲೋಕಪ್ರೇಮಿಯ ದೃಷ್ಟಿಯನ್ನು ಸೆಳೆಯುವುದು. ಮುಂದಿನ ಬುದ್ಧನ ಯಶೋಧಾರೆ ಯಾರು ಯಶೋಧರೆಯೇ ಅಲ್ಲವೇ ? ಇಂತಹ ಪಾತ್ರ ಕೊನೆಯ ಅಂಕದಲ್ಲಿ ಮಾತ್ರ ಕಳೆಗುಂದುತ್ತದೆ. ಬುದ್ಧನನ್ನು ಕಂಡನೊಡನೆಯೇ " ನನ್ನನ್ನೂ ಕುಮಾರ ರಾಹುಲನನ್ನೂ ಬಿಟ್ಟೇಕೆ ಓಡಿದಿರಿ " ಎಂದು ಕೇಳುತ್ತಾಳೆ. ಬುದ್ಧನ ಬರು ವಿಗೆ ಅನಂತ ವರ್ಷಗಳು ಕಳೆದಿರುವ ಕ್ಷಮಾಶೀಲಳಾದ ಯಶೋಧರೆ ಒಂದೇ ಕ್ಷಣದಲ್ಲಿ ತನ್ನ ರತ್ನಸಿಂಹಾಸನದಿಂದ ಉರುಳಿ ಬಿಡುತ್ತಾಳೆ.

ಈ ಒಂದು ದೋಷವನ್ನುಳಿದು ನಾಟಕ ಎಲ್ಲಯೂ ಹದಗೆಟ್ಟಿಲ್ಲ, ಎಲ್ಲೆಯೂ ಕಳೆಗೊಂದಿಲ್ಲ.

ಬುದ್ಧ, ಯಶೋಧರೆ ಪಾತ್ರಗಳನ್ನಭಿನಯಿಸಿದ ಶ್ರೀ ಪೀರ್ ಮತ್ತು ಶ್ರೀಮತಿ ರಾಜಮ್ಮ ಇಬ್ಬರೂ ಉತ್ತಮ ನಟರು. ಲೋಕವೃತ್ತಿಯನ್ನೂ ದೇಹದ ಜರಾಮರಣಸ್ಥಿತಿಯನ್ನು ಕಂಡ ಸಿದ್ಧಾರ್ಥನ ಮಾನಸಿಕ ವೇದನೆ, ತಪೋನಿಷ್ಠನಾಗಿ ಕುಳಿತ ಸಿದ್ಧಾರ್ಥನ ಚಿತ್ತಸ್ಥೈರ್ಯ, ಪ್ರತಿಯೊಂದು ಸನ್ನಿವೇಶವನ್ನೂ ಗಾಂಭೀರ್ಯದಿಂದ ಎದುರಿಸುವ ಬುದ್ಧೋಚಿತವಾದ ಮನೋಗುಣದ ಪ್ರದರ್ಶನ ಪೀರರ ಅಭಿನಯದ ಹೆಗ್ಗುರುತುಗಳು. ಇವರ

ಕಂಠದಲ್ಲಿ ವಾಗ್ದೇವಿಯ ವೀಣಾವಿತಾನವಿದೆ, ಇವರ ಮಾತುಗಾರಿಕೆಯಲ್ಲಿ ಕವಿಯ ಅವಿಕುಂಠಿತ ಅಂತರಂಗದ ಭಾವನಾ ತರಂಗಗಳು ಎದ್ದು ಎದ್ದು ಕಾಣುತ್ತವೆ. ಮುಖಭಾವ, ದೇಹಭಂಗಿಗಳಲ್ಲಿ ಪಾತ್ರದ ತಾದಾತ್ಮ್ಯತೆ ಇದೆ. ಪಾತ್ರಕ್ಕೂ ನಟನಿಗೂ ಇಂತಹ ಮಧುರವೈತ್ರಿ ಕೂಡುವುದು ಬಹಳ ಅಪೂರ್ವ. ಶ್ರೀಮತಿ ರಾಜಮ್ಮ ಲಲಿತವಾಗಿ ಅಭಿನಯಿಸಬಲ್ಲ ಕಲಾವಿದೆ. ಆದರೆ ಆಳವಾದ ರಸವಂತಿಗಳ ನಿರ್ವಹಣ ಈಕೆಯಿಂದ ಸಾಧ್ಯ ವಿಲ್ಲ. ಧ್ವನಿಯಲ್ಲಿ ಶೋಕವಿದೆ. ಮಿಶ್ರ ಅಭಿನಯಕ್ಕೂ ಶೋಕವಲ್ಲದ ರಸಗಳಿಗೂ, ಅದರಿಂದ ಬಹಳ ಅನನುಕೂಲವಿದೆ. ಯುಕ್ತ ಶಿಕ್ಷಣದಿಂದ ಈಕೆ ಉತ್ತಮ ನಟಿಯಾಗುವ ಲಕ್ಷಣಗಳನ್ನು ತೋರಿಸುತ್ತಾಳೆ.

ಚೆನ್ನ ತನ್ನ ಪಾತ್ರವನ್ನು ಎಲ್ಲಿಯೂ ಕೆಡಿಸಲಿಲ್ಲ. ಆದರೆ ಇವರ ಅಭಿನಯದಲ್ಲಿ 'ಬೇಕು, ಬೇಕು'ಗಳೇ ಬಹಳ. ಮನ್ಮಥ ಆ ಪಾತ್ರಕ್ಕೆ ಅಪಕಾರ. ಇತರ ಸಹಪಾತ್ರಗಳ ಬಗ್ಗೆ ಹೇಳಬೇಕಾದುದು ಬಹಳವೇನೂ ಇಲ್ಲ. ಪೀರರು ತಮ್ಮ ಸಹನಟರ ಕಡೆಗೂ ಕಲಾದೃಷ್ಟಿಯಿಂದ ಲಕ್ಷ್ಯವಿಡ ಬೇಕಾದುದು ಅಗತ್ಯವೆಂದು ನಾವು ಸೂಚಿಸದಿರಲಾರೆವು.

ನಾಟಕದ ಸಂಗೀತ ಒಟ್ಟಿನಲ್ಲಿ ಸಮರ್ಪಕವಾಗಿದ್ದರೂ ಬುದ್ಧನ ಸಂಗೀತ ನಿಯೋಜನ ತೃಪ್ತಿಕರವಾಗಿಲ್ಲವೆಂದೇ ಹೇಳಬೇಕು. ಹಿಂದೂ ಸ್ಥಾನಿ ಕವಾಲಿ, ಘಸಲ್ ಮಾದರಿಯ ಹಾಡುಗಾರಿಕೆ ಬುದ್ಧನ ಗಾಂಭೀ ರ್ಯಕ್ಕೆ ಕುಂದು ತರುತ್ತದೆ. ಶ್ಲೋಕಗಳಿಗೆ ಅಸ್ತಾಯಿ, ಅಂತರದ ನಿಯೋ ಜನೆ ಹೂಡಿ ಘಸಲಿನಂತೆ ಹಾಡುವುದು ಹಾಸ್ಯಾಸ್ಪದವಾಗುತ್ತದೆ.

ಉದಾತ್ತ, ಗಂಭೀರ, ಸಾಹಿತ್ಯ ಕಲಾಪೂರ್ಣ ನಾಟಕಗಳು ನಾಟ ಕೋಪಜೀವಿ ಸಂಘಗಳಿಗೆ ಸಾಧ್ಯವಿಲ್ಲವೆನ್ನುವವರಿಗೆ ಪೀರರೂ, ಪುಟ್ಟಸ್ವಾ- ಮಯ್ಯನವರು ಯೋಗ್ಯವಾದ ಮಾರುತ್ತರವನ್ನು ಈ ನಾಟಕದಿಂದ ಕೊಟ್ಟಿ ದ್ದಾರೆ. ಇವರ ಮೇಲ್ಪಂಕ್ತಿಯನ್ನು ಇತರ ಮಂಡಳಿಯವರೂ ಅನುಸರಿಸಲಿ ಎಂಬುದೇ ನಮ್ಮ ಆಶಯ." *

ಪೀರರ ಕಲಾಜೀವನದ ಅತ್ಯುನ್ನತ ಕಾಲವೆಂದರೆ 'ಗೌತಮ ಬುದ್ಧ' ನನ್ನಾಡುತ್ತಿದ್ದ ಕಾಲ. ಸಾಮಾನ್ಯ ಜನಗಳಿಗೆ ಮೆಚ್ಚುಗೆಯಾಗುವ

* ವಿಶ್ವವಾಣಿ. ಸಂ. ೧. ಸಂಚಿಕೆ ೬. ಪುಟ ೩೧೮.

ಯಾವ ಸಲಕರಣೆಗಳನ್ನು ಪಡೆಯದಿದ್ದ ಈ ನಾಟಕ ಕನ್ನಡ ಜನತೆಯು ಪರವಮಾದರಕ್ಕೆ ಪಾತ್ರವಾಯಿತು. ಗೌತಮ ಬುದ್ಧ ನಾಟಕದಿಂದ ಪೀರರು ಕನ್ನಡ ರಂಗಭೂಮಿಯ ಯೋಗ್ಯತೆಯನ್ನು ಬಹಳ ಮೇಲ್ಮಟ್ಟಕ್ಕೆ ಒಯ್ದರು. ದೊಡ್ಡ ದೊಡ್ಡ ಪಟ್ಟಣಗಳಲ್ಲಿಯಲ್ಲದೆ ಕುಗ್ರಾಮಗಳಲ್ಲಿಯೂ ಜನ 'ಬುದ್ಧ'ನ ಸಂದರ್ಶನಕ್ಕೆ ಧಾವಿಸಿ ಬರುತ್ತಿದ್ದರು. ಈ ಮಂಡಳಿ ಸಾಗರದಲ್ಲಿ ಬೀಡು ಬಿಟ್ಟಿತ್ತು. ಹರಕು ಮುರುಕು ಪರದೆಗಳು, ಜೀರ್ಣ ವಿಜೀರ್ಣ ವಸ್ತ್ರಾಭರಣಗಳೇ ಪೀರರ ಸಂಪತ್ತು. ಇವರ ಮೇಲಣ ಸ್ಪರ್ಧೆಯಿಂದ ಒಂದು ಧನಿಕ ಕಂಪೆನಿ ನಾಟಕಗಳನ್ನಾಡತೊಡಗಿತು. ಪೀರರ ರಂಗಮಂದಿರ ಯಾವಾಗಲೂ ತುಂಬಿರುತ್ತಿತ್ತು; ಧನಿಕ ಕಂಪೆನಿ ಜನರ ಉಪೇಕ್ಷೆ ಸಹಿಸಲಾರದೆ ಅಲ್ಲಿಂದ ಕಂಬಿ ಕೀಳುವ ಪ್ರಸಂಗ ಬಂತು.

'ಗೌತಮ ಬುದ್ಧ' ಸಾಮಾನ್ಯ ನಟರಿಗೆ ನಿಲುಕುವ ನಾಟಕವಲ್ಲ. ಸನ್ನಿವೇಶ, ಸಂವಿಧಾನ ಚಮತ್ಕಾರವಿಲ್ಲ, ಮಾತುಗಳ ಆರ್ಭಟವಿಲ್ಲ. ಹಾಸ್ಯ ಅಪಹಾಸ್ಯಗಳ ಸಹಾಯ ಪಡೆಯಲು ಸಾಧ್ಯವೇ ಇಲ್ಲ. ಒಂದು ಪವಿತ್ರ ಜೀವನದ ಬಾಳ ಬೆಳವಿಗೆಯ ವಿಪ್ಲವ ಕಥೆ. ಮನಸ್ಸಿನ ಹೊಯ್ದಾಟವನ್ನು ತೋರಿ, ಗೌತಮದೇವ ಹೇಗೆ ಅವುಗಳನ್ನೆದುರಿಸಿ ಕೃತಕೃತ್ಯನಾಗಿ ಜಗತ್ತಿನ ಬೆಳಕಾದ ಎಂಬುದನ್ನು ಸ್ಥಾಪಿಸಬೇಕಾಗಿತ್ತು. ಪೀರರಿಗಿಂತಲೂ ಉತ್ತಮವಾಗಿ ಈ ಪಾತ್ರವನ್ನು ನಿರ್ವಹಿಸುವವರು ಅಂದು ಕರ್ನಾಟಕದಲ್ಲಿ ಯಾರೂ ಇರಲಿಲ್ಲ—ಇಂದು ಇದ್ದಾರೆಯೇ ಎಂದು ಯೋಚಿಸುತ್ತಿದ್ದೇನೆ.

ಕನ್ನಡ ರಂಗಭೂಮಿಗೆ ಮೂರು ಮಹತ್ವದ ಸೋಪಾನಗಳನ್ನು ಕಟ್ಟಿಕೊಟ್ಟ ಪೀರರು ೧೯೩೦ರಲ್ಲಿ ಮೈಸೂರಿನಲ್ಲಿ ಅಕಾಲ ಮರಣಕ್ಕೆ ತುತ್ತಾದರು. ಅಂದಿನಿಂದ ಕನ್ನಡ ರಂಗಭೂಮಿಗೆ ಕತ್ತಲು ಕವಿಯಿತು.

ಪೀರರು ಕಾಲವಶರಾಗಿರುವುದಕ್ಕೆ ಕೆಲವು ದಿವಸ ಮುಂಚೆ ನಡೆದ ಎರಡು ಪ್ರಸಂಗಗಳನ್ನು ಪ್ರಸ್ತಾಪಿಸಬಹುದು. ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ಪ್ರತಿಭಾವಂತರೆಲ್ಲರ ಆಡುಂಬೊಲವಾಗಬೇಕೆಂದು ಬಯಸುತ್ತಿದ್ದ ನಾನು ಪೀರರನ್ನು ಒಂದು ಉಪನ್ಯಾಸ ಮಾಡಿರೆಂದೆ. ಬಹಳ ಸಂಕೋಚದಿಂದ, ಅವರು ನನ್ನ ಒತ್ತಾಯಕ್ಕಾಗಿ ಒಪ್ಪಿಕೊಂಡರು. ಉಪನ್ಯಾಸಕ್ಕೆ

ಒಂದೆರಡು ಗಂಟೆ ಮುಂಚೆ ವಿಷಯವನ್ನು ನನ್ನಲ್ಲಿ ಚರ್ಚಿಸಿದರು. ಪರಿಷತ್ತಿನಲ್ಲಿ ಉಪನ್ಯಾಸ—ಪರಿಷತ್ತು ಬಿರಿಯುವಷ್ಟು ಜನಸಂದಣಿ. ಪೀರರು ಎರಡು ಗಂಟೆಗಳ ಕಾಲ ಅವ್ಯಾಹತವಾಗಿ ಮಾತನಾಡಿದರು. ಕನ್ನಡ ರಂಗಭೂಮಿಯ ಪರಿಸ್ಥಿತಿ, ನಾಟಕ ಜೀವನದಲ್ಲಿ ತಮಗಾಗಿರುವ ಅನುಭವಗಳನ್ನು ಕುರಿತು ಪ್ರಸ್ತಾಪಿಸಿದರು. ಆಗ ಅವರು ಹೇಳಿದ ಒಂದು ಮಾತಿದು "ನನ್ನ ಕಂಪೆನಿ ಹೇಗೆ ನಡೆದಿದೆಯೆಂದು ಹೇಳಬೇಕಾದ ಕಾರಣವೇ ಇಲ್ಲ. ರಂಗಮಂದಿರ ಯಾವಾಗಲೂ ತುಂಬಿರುತ್ತದೆ. ಯಾರಿಂದ ಎನ್ನುವಿರಿ—ನನ್ನ ಸಾಲಗಾರರಿಂದ. ಒಳಗೆ ಬಣ್ಣದ ಕೋಣೆಯಲ್ಲಿಯೂ ಅವರೇ—ಹೊರಗೆ ಸೋಫಾಗಳ ಮೇಲೂ ಅವರೇ. ನನ್ನ ಮೇಲೆ ವಾರಂಟುಗಳ ಸುರಿಮಳೆ. ಆದರೆ ಭಗವದನುಗ್ರಹದಿಂದ ರಂಗವನ್ನು ಪ್ರವೇಶಿಸಿದೆನೆಂದರೆ ಅವುಗಳೆಲ್ಲ ಮರೆತು ಹೋಗುತ್ತವೆ. ನನ್ನನ್ನು ಕಾಪಾಡಿರುವುದು ಈ ಪಾತ್ರಲೀನತೆ. ರಂಗದ ಮೇಲಿದ್ದಷ್ಟು ಹೊತ್ತಾದರೂ ನಾನು ತಾಪತ್ರಯಗಳನ್ನು ಮರೆಯುತ್ತೇನೆ."

ಈ ಮಾತು ಅಕ್ಷರಶಃ ನಿಜ.

ಪೀರರ ಜೀವಮಾನದ ಕೊನೆಯ ಕ್ಯಾಂಪು—ಕೊಡಗು. ಅಲ್ಲೇ ಅವರಿಗೆ ಮಲೇರಿಯಾ ಜ್ವರ ಬರಲಾರಂಭಿಸಿತು. ಕ್ಯಾಂಪು ನಡೆದಿರುವಾಗಲೊಮ್ಮೆ ಇದ್ದಕ್ಕಿದ್ದಂತೆ ನನ್ನಲ್ಲಿಗೆ ಬಂದರು. ಆಶ್ಚರ್ಯ, ಸಂತೋಷಗಳೆರಡೂ ನನಗಾದವು.

"ಏನು ಬಂದಿರಿ, ಜನಾಬ್"

"ನಿಮ್ಮಲ್ಲಿ ಒಂದು ಕೆಲಸಕ್ಕಾಗಿ ಬಂದಿದ್ದೇನೆ."

"ಕೊಡಗಿನ ಕ್ಯಾಂಪು ಮುಗಿಯಿತೇ ?"

"ಇಲ್ಲ—ನಡೆದಿದೆ. ನಿಮ್ಮನ್ನು ಕಾಣುವುದಕ್ಕಾಗಿಯೇ ಬಂದೆ."

"ಹೇಳಿ—ಏನು ವಿಷಯ."

"ಮಾಡಿಕೊಡುತ್ತೇನೆ ಎಂದು ನೀವು ಮಾತುಕೊಟ್ಟರೆ ಹೇಳುತ್ತೇನೆ."

"ನಿಮ್ಮ ಕೋರಿಕೆಗೆ ಇಲ್ಲವೆನ್ನುತ್ತೇನೆಯೇ—ಹೇಳಿ."

"ನನ್ನ ಸ್ಥಿತಿಯೆಲ್ಲಾ ನಿಮಗೆ ಗೊತ್ತೇ ಇದೆ. ದೇವರು ನನಗೆ

ಕೈತುಂಬ ಹಣ ಕೊಡಲಿಲ್ಲ. ನಾಟಕದಲ್ಲಿ ಏನು ಏನೋ ಮಾಡಬೇಕೆಂದಿದ್ದೇನೆ—ಒಂದಕ್ಕೂ ಅವಕಾಶವಿಲ್ಲ."

"ಎಲ್ಲ ಅನುಕೂಲವಿಟ್ಟುಕೊಂಡು ನಾಟಕ ಮಾಡುವುದು ದೊಡ್ಡದಲ್ಲ. ನೀವು ಮಾಡುತ್ತಿರುವ ಕೆಲಸ ಮಹಾಸಾಹಸದ್ದು ನನ್ನಿಂದ ಏನಾಗಬೇಕು ಹೇಳಿ, ಅವಶ್ಯಕವಾಗಿ ಮಾಡಿಕೊಡುತ್ತೇನೆ."

"ಮಡಿಕೇರಿಯಲ್ಲಿ ನಿಮ್ಮ 'ಜಾತಿ ಹೀನನ ಮನೆಯ ಜ್ಯೋತಿ' ಪುಸ್ತಕ ಸಿಕ್ಕಿತು. ಓದಿದೆ. ಆ ಕಥೆ ನನ್ನನ್ನು ಸುಮ್ಮನೆ ಕಾಡುತ್ತಿದೆ. ನೀವು ದಯೆಯಿಟ್ಟು ನಾಟಕ ಬರೆದುಕೊಟ್ಟರೆ ಆಡುತ್ತೇನೆ. ನಿಮ್ಮ ನಾಟಕವೊಂದನ್ನು ಕೂಡಿಸಬೇಕೆಂಬ ಬಹು ದಿವಸಗಳ ಇಚ್ಛೆ ಪೂರೈಸಿದ ಹಾಗಾಗುತ್ತದೆ." ಎಂದು ರಂಗದಮೇಲೆ ತಾವು ಪ್ರದರ್ಶಿಸಬೇಕೆಂದಿದ್ದ ರೀತಿಯನ್ನು ಕುಲಂಕಷವಾಗಿ ವರ್ಣಿಸಿದರು. ದೃಶ್ಯನಿಯೋಜನೆ ಭೂಮಿಕೆ ಎಲ್ಲ ವಿಷಯಗಳನ್ನು ದೀರ್ಘವಾಗಿ ಆಳವಾಗಿ ವಿಚಾರಮಾಡಿದ್ದರು.

"ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲೂ ಅನ್ನ ಅಂದ ಹಾಗಾಯಿತು ಪೀರ್. 'ಜಾತಿ ಹೀನನ ಮನೆಯ ಜ್ಯೋತಿ' ಯನ್ನು ನಾಟಕವನ್ನಾಗಿಸಿ ನಿಮ್ಮ ಕೈಯಲ್ಲಿ ಆಡಿಸಬೇಕೆಂಬುದು ನನ್ನ ಬಹಳ ದಿವಸಗಳ ಆಸೆ. ನಿಮ್ಮನ್ನು ಬುದ್ಧನನ್ನಾಗಿ ನೋಡಿದೆ. ಬಸವಣ್ಣನವರನ್ನಾಗಿ ನೋಡಬೇಕೆಂಬುದು ನನ್ನ ಹಂಬಲ. ಆಗಲಿ—ಅವಶ್ಯಕವಾಗಿ ಬರೆದುಕೊಡುತ್ತೇನೆ."

"ನೀವು ಸ್ವಲ್ಪ ಬೇಗ ಮಾಡಿಕೊಟ್ಟರೆ ಮಡಿಕೇರಿ ಬಿಡುವುದರೊಳಗಾಗಿ ಅದನ್ನು ಕೂಡಿಸಿ ಆಡುತ್ತೇನೆ. ನೀವು ಖಂಡಿತ ಬರಬೇಕಾಗುತ್ತದೆ."

"ಆಗಲಿ ಸಂತೋಷ."

ಆ ನಾಟಕವನ್ನು ರಂಗಭೂಮಿಯ ಮೇಲೆ ಕಾಣುವ ಸಂತೋಷ ಪೀರರಿಗೆ, ನನಗೆ ಇಬ್ಬರಿಗೂ ಲಭಿಸಲಿಲ್ಲ. ನಾಟಕ ನಾನು ಬರೆದು ಮುಗಿಸುವಷ್ಟರಲ್ಲಿ ಅವರ ಅಕಾಲ ಮರಣವಾರ್ತೆ ಸಿಡಿಲಿನಂತೆ ಬಂದು ಬಡಿಯಿತು. ಅಂದಿಗೇ ಮುಗಿಯಬೇಕಾಗಿದ್ದ ಕೆಲಸ ಇಂದಿಗೂ ಹಾಗೇ ಉಳಿದಿದೆ.

ಪೀರರ ನಾಟಕವನ್ನೊಮ್ಮೆ ರಸಋಷಿ ಪಂಡಿತ ತಾರಾನಾಥರು ನೋಡಿದರು. ಅವರ ಆನಂದಕ್ಕೆ ಪಾರವಿರಲಿಲ್ಲ. ನಟರನ್ನು ಹರಸುತ್ತಾ ‘ ರಂಗಭೂಮಿಗೆ ಪೀರರು ಪೀರ (ಗುರು)ರಾಗಿದ್ದಾರೆ ; ಸಿಂಹರು ಸಿಂಹರಾಗಿದ್ದಾರೆ ’ ಎಂದರು. ಇನ್ನೊಮ್ಮೆ ಧಾರವಾಡದಲ್ಲಿ ಪೀರರ, ಸಿಂಹರು ಪರಿಚಯ ಮಾಡಿಕೊಡುತ್ತಾ ಪ್ರೊ. ಜಾಗಿರದಾರರು “ ಪೀರರ (ಸನ್ಯಾಸಿಗಳ) ಹಾಗೆ ಕಾಣುವರೇ ಸಿಂಹರು ; ಸಿಂಹದ ಹಾಗೆ ಕಾಣುವವರೇ ಪೀರರು ” ಎಂದು ಹೇಳಿದರು. ಪೀರರು ನೋಡುವುದಕ್ಕೆ ಸಿಂಹದ ಹಾಗಿದ್ದರೂ ಅವರ ಮನೋವೃತ್ತಿ ಪೀರರದಾಗಿತ್ತು.

ನನ್ನ ಪರಮ ಮಿತ್ರರಾದ ಕೈಲಾಸವಾಸಿ ಪ್ರೊ. ಅ. ತು. ಸಾಸನೂರವರು ಕಾಹಿಲೆಯಾಗಿದ್ದರೂ ಹಾವೇರಿಗೆ ಧಾರವಾಡದಿಂದ ಹೋಗಿ ಪೀರರ ನಾಟಕಗಳನ್ನು ನೋಡಿ ಬರುತ್ತಿದ್ದರು. ನಾನೂ ಅವರೂ ಕೂಡಿದಾಗ ಪೀರರ ಅಭಿನಯ ಕಲೆಯ ಬಗ್ಗೆ ಇರುಳೆಲ್ಲಾ ಮಾತನಾಡಿದುದುಂಟು. ಸಾಸನೂರವರ ಹಲವು ಕನಸುಗಳಲ್ಲಿ ಪೀರರ ಬುದ್ಧ—ಷಹಜಹಾನ್ ನಾಟಕಗಳು ಐರೋಪ್ಯದೇಶಗಳಿಗೆ ಹೋಗಬೇಕೆಂಬುದೂ ಒಂದು.

ಕಲಿತವರನ್ನು ಕಲಿಯದವರನ್ನೂ ಆಕರ್ಷಿಸುವ ಪ್ರತಿಭೆ ಪೀರರ ಅಭಿನಯ ಕಲೆಯಲ್ಲಿತ್ತು. ಎಲ್ಲರ ಹೃದಯವನ್ನು ತಮ್ಮ ಸರಳತೆಯಿಂದ ಸೌಜನ್ಯದಿಂದ ಅವರ ಸೆರೆ ಹಿಡಿಯುತ್ತಿದ್ದರು.

ಕನ್ನಡನಾಡು ಪೀರರವರ ನಿಧನದಿಂದ ಸೀಮಾಪುರುಷನಾದ ಒಬ್ಬ ಕಲಾವಿದನನ್ನು ಕಳೆದುಕೊಂಡಿತು. ನಾನು ಒಬ್ಬ ಆತ್ಮೀಯನನ್ನು ಕಳೆದುಕೊಂಡೆ. ಹಿಂದೂ—ಮುಸ್ಲಿಮ ಎಂದು ಜಗಳವಾಡುವವರು ಅವಧೂತ ಶಿಶುನಾಳ ಷರೀಫ ಸಾಹೇಬ, ಚಿತ್ರಗಾರ ಕಮಡೋಳಿ, ನಟಶೇಖರ ಮಹಮದ್ ಪೀರರಿಂದ ಪಾಠ ಕಲಿಯಬೇಕು.

೯ – ೪ – ೧೯೪೬

---

## ೧೫. ನಟಭೂಷಣ ಬಸವರಾಜ್ ಮನ್‌ಸೂರ್

ಧಾರವಾಡದ ಮುನಿಸಿಪಾಲಿಟಿಯ ಮುಂದಿನ ಕೂಟವಲ್ಲಿಯೊಂದು ಪ್ರಸಿದ್ಧ ಪುಸ್ತಕದ ಅಂಗಡಿ—ಕರ್ನಾಟಕ ಸಾಹಿತ್ಯ ಮಂದಿರ. ಅಂಗಡಿಯ ಮುಂಭಾಗದಲ್ಲಿ ಒಂದು ಎತ್ತರದ ಮೇಜು. ಅದರ ಮೇಲೆ ಪದ್ಮಾಸನ ಹೂಡಿ, ಕೈಯಲ್ಲಿ ಪುಸ್ತಕ ಹಿಡಿದು ತದೇಕಚಿತ್ತನಾಗಿ ಒಂದು ವ್ಯಕ್ತಿ ಆಗಾಗ್ಗೆ ಕುಳಿತಿರುವುದುಂಟು. ಆಜಾನುಬಾಹು. ತಲೆ ಪೂರಾ ಬಕ್ಕ—ಸದಾ ಶುಭ್ರ ಉಡುಗೆ ತೊಡಿಗೆ. ಆ ವ್ಯಕ್ತಿಯೇ ಮನ್‌ಸೂರ್ ಬಸವ ರಾಜರು. ಕನ್ನಡ ರಂಗಭೂಮಿಯ ವರನಟ ಬಸವಣ್ಣಪ್ಪ.

ಇಟ್ಟ ಹೆಸರು ಯಾರಿಗಾದರೂ ಒಪ್ಪುವುದಾದರೆ ಬಸವಣ್ಣಪ್ಪನವರಿಗೆ ಅವರ ಹೆಸರು ತುಂಬ ಒಪ್ಪು. ಹೆಸರಿಗೆ ತಕ್ಕ ಗುಣ, ಶೀಲ, ನಡೆ, ನುಡಿ. ವೃತ್ತಿಯಲ್ಲಿ ನಟರು, ಪ್ರವೃತ್ತಿಯಲ್ಲಿ ವಿರಕ್ತರು, ನೋಡುವುದಕ್ಕೆ ಜಗ ಜಟ್ಟಿ, ರಂಗದ ಮೇಲೆ ಕೋಮಲ ಕಲಾವಿದ.

ಅವರ ಅಭಿರುಚಿಯೂ ಅಷ್ಟೇ ವಿಚಿತ್ರ, ಅಷ್ಟೇ ಸೊಗಸು. ತಡಾಕಿ ಮಲ್ಲಪ್ಪನವರ ಕುಸ್ತಿ ನೋಡಲಿಕ್ಕೆ ನಾಟಕ ನಿಲ್ಲಿಸಿ ಕೊಲ್ಹಾಪುರಕ್ಕೆ ಹೋಗು ತ್ತಾರೆ; ಅಲ್ಲಾದಿಯಾ ಖಾನರ ಗಾನ ಕೇಳಲಿಕ್ಕೆ ಮುಂಬಯಿಗೆ ನಡೆದಾ ದರೂ ಹೋಗುತ್ತಾರೆ. ಕೈಯಲ್ಲಿ ಪುಸ್ತಕ ಹಿಡಿದು ನಾಯಕ ನಾಯಕಿಯ ರೊಂದಿಗೆ ಗಳಗಳನೆ ಅತ್ತು ಬಿಡುತ್ತಾರೆ—ಪಾಕಿಸ್ತಾನದ ಭಾರತ ಧ್ವಂಸ ಯೋಜನೆಯನ್ನು ಕೇಳಿ ರಣಭೀಷ್ಮನಂತೆ ಕೆರಳುತ್ತಾರೆ. ಹಸ್ತ ಸಾಮುದ್ರಿಕ

ಹೇಳುವವರು ಜಾತಕ ನೋಡುವವರೆಂದರೆ ಬಸವಣ್ಣಪ್ಪನವರಿಗೆ ಪಂಚ ಪ್ರಾಣ, ಅಷ್ಟೇ ಅಭಿಮಾನ ಸೊಗಸಾದ ಅತ್ತರ್ ಜವ್ವಾಜಿಗಳಲ್ಲಿ. ಕೈಯಲ್ಲಿ ರೊಕ್ಕವಿದ್ದರೆ ನೂರು ರೂಪಾಯಿ ತೊಲದ ಕನೌಜ್ ಪರಿಮಳ ದ್ರವ್ಯಗಳನ್ನು ಕೊಳ್ಳಲು ಹಿಂಜರಿಯುವುದಿಲ್ಲ. ಕಷ್ಟವೆಂದರೆ ಕೈಗಡ ತೆಗೆದುಕೊಂಡಾದರೂ ಸಹಾಯ ಮಾಡುವ ಮನೋಭಾವ. ಕಂಠಪೂರ್ತಿ ದುಃಖ ಉಂಡಿದ್ದರೂ ದುಃಖ ಸಹಿಸದ ಜೀವ—ಹೆರರ ದುಃಖಕ್ಕೆ ಮಮ್ಮಲ ಮರುಗುವ ಹೆಂಗರುಳು ಇವರಿಗಲ್ಲದೆ ಇನ್ನು ಯಾರಿಗೆ 'ಬಸವಣ್ಣ'ನೆಂಬ ಹೆಸರು ಒಪ್ಪುತ್ತದೆ.

ಕನ್ನಡ ರಂಗಭೂಮಿ ಉಚ್ಛ್ರಾಯಸ್ಥಿತಿಯನ್ನು ಮುಟ್ಟುವುದಕ್ಕೆ ಬಸವರಾಜರ ಸೇವೆ ಅಪಾರ. ಒಂದು ಜೀವಮಾನವನ್ನೇ ನಾಟಕಕ್ಕಾಗಿ ತೇಯ್ದಿದ್ದಾರೆ—ತೇಯುತ್ತಿದ್ದಾರೆ. ಸಾಲ ಸೋಲಗಳ ಬಾಧೆಯಲ್ಲಿ ಹಲವು ಸಾರೆ ಕಂಪೆನಿ ನಿಂತು ಹೋಗಿದೆ. ಆದರೆ ಬಸವರಾಜರ ಧೃತಿಗೆಡದು—ಮತ್ತೆ ಕಂಪೆನಿ ಹೇಗೋ ಚಿಗುರಿ ನಿಲ್ಲುತ್ತದೆ. ತಮ್ಮೆಲ್ಲ ತಾಪತ್ರಯಗಳನ್ನು ಮರೆತು ಬಸವರಾಜರು ಮತ್ತೆ ರಂಗದ ಮೇಲೆ 'ನೀಲಮೇಘಶಾಮ' ನಾಗುತ್ತಾರೆ.

ಬಸವರಾಜರನ್ನು ಸಾಕಿ ಸಲಹಿದವರು ಧಾರವಾಡದಲ್ಲಿ ಕನ್ನಡ ಪ್ರಸಾರವನ್ನು ಕಳೆದ ಶತಮಾನದಂತ್ಯದಲ್ಲಿ ಅಮೋಘವಾಗಿ ಮಾಡಿದ ಕೈ. ಆನಾಡಿ ಚೆನ್ನವೀರಪ್ಪನವರು. ಪ್ರಾಥಮಿಕ ಶಿಕ್ಷಣ ಮುಗಿಯಿತು. ಆದರೆ ಬಸವರಾಜರಿಗೆ ಸಾಲೆ ಓದಿನ ಮೇಲೆ ಗಮನವಿಲ್ಲ. ಸಂಗೀತದ ಹುಚ್ಚು ಬಹಳ. ಅದನ್ನೇ ಕಲಿಯಲೆಂದು ತಂದೆ ಭೀಮರಾಯಪ್ಪನವರು ಅಪ್ಪಯ್ಯಸ್ವಾಮಿಗಳೆಂಬ ಕರ್ನಾಟಕ ಸಂಗೀತ ವಿದ್ವಾಂಸರನ್ನು ತಮ್ಮ ಮನಸೂರ್ ಗ್ರಾಮಕ್ಕೆ ಬರಮಾಡಿಕೊಂಡು ಅವರಿಂದ ಎರಡು ವರ್ಷ ಶಿಕ್ಷಣ ಕೊಡಿಸಿದರು. ಮನೆಯ ಪರಿಸ್ಥಿತಿ ಸುಖವ್ಯಾಸಂಗಕ್ಕೆ ಅನುಕೂಲವಾಗಿರಲಿಲ್ಲ. ಬಸವರಾಜರು ೧೪ನೆಯ ವಯಸ್ಸಿನಲ್ಲಿ ವೈ. ವಾ. ವಾಮನರಾಯರ ನಾಟಕದ ಕಂಪೆನಿ ಸೇರಬೇಕಾಗಿ ಬಂತು. ವಯಸ್ಸು, ಮಧುರ ಕಂಠ, ಮೋಹಕರೂಪುಗಳಿಂದ ಕೂಡಿದ್ದ ಬಸವರಾಜರಿಗೆ ಖ್ಯಾತಿ ಬಹಳ ದೂರ ನಿಲ್ಲಲಿಲ್ಲ. ಕೃಷ್ಣ, ಪ್ರಹ್ಲಾದ ಪಾತ್ರಗಳಲ್ಲಿ ಹೆಸರು ಬಂತು. ಸಾಮಾನ್ಯ

ವಾಗಿ ನಾಟಕದ ಕಂಪೆನಿಗಳ ಚರಿತ್ರೆಯನ್ನು ತೆಗೆದುಕೊಂಡರೆ ಅವುಗಳ ಸಂಪರ್ಕ, ಸಹವಾಸ ಹೇಯುವೆಂಬ ಪ್ರತೀತಿ ಬಂದಿದೆ. ಬರಿಯ ಪ್ರತೀತಿ ಯಲ್ಲ. ಸತ್ಯ ಕಥೆಯೂ ಹಾಗೇ ! ವಾಮನರಾಯರು ಈ ಅಪವಾದದಿಂದ ದೂರವಾಗಿದ್ದರು. ಸ್ವಭಾವತಃ ಶೀಲವಂತರೂ, ಸುಸಂಸ್ಕೃತರೂ ಆದವರು ತಮ್ಮ ನಟರೂ ಹಾಗೇ ಇರಬೇಕೆಂದು ಬಯಸುತ್ತಿದ್ದರು. ನಟರನ್ನು ಮಕ್ಕಳ ಹಾಗೆ ಕಾಣುತ್ತಿದ್ದರು, ಆದರೆ ಗುರುವಿನ ಕಾಠಿಣ್ಯ ತೊರೆದಿರಲಿಲ್ಲ. ಬಸವಣ್ಣಪ್ಪನವರ ಓದುವ ಅಭ್ಯಾಸಕ್ಕೆ ಪುಟಗೊಟ್ಟದಲ್ಲದೆ ತಾವೇ ಸಂಗೀತ ಅಭ್ಯಾಸ ಮಾಡಿಸುತ್ತಿದ್ದರು. ಶೀಲವಂತ ಜೀವನದ ಕಡೆಗೆ ನಟರ ಮನಸ್ಸು ಹೋಗುವಂತೆ ಸರ್ವಪ್ರಯತ್ನ ಮಾಡುತ್ತಿದ್ದರು. ವಾಮನರಾಯರ ಈ ಉಪಕಾರ, ಮೇಲ್ಪಂಕ್ತಿ ಚಿರಸ್ಮರಣೀಯವಾದುವುಗಳಾಗಿವೆ. ರಾಯರ ಕಂಪೆನಿ ಒಂದು ಸಲ ಮೈಸೂರಿಗೆ ಬಂದಿದ್ದಾಗ ಸಂಗೀತಶಾಸ್ತ್ರರತ್ನ ಕೆ. ವಾಸುದೇವಾಚಾರ್ಯರ ಕೈಯಲ್ಲಿ ಬಸವಣ್ಣಪ್ಪನವರಿಗೆ ಕೆಲಕಾಲ ಸಂಗೀತ ಪಾಠವನ್ನೂ ಹೇಳಿಸಿದರು.

ವಾಮನರಾಯರ 'ವಿಶ್ವಗುಣಾದರ್ಶ ನಾಟಕ ಮಂಡಳಿ' ಯಲ್ಲಿ ಬಸವರಾಜರು ೧೩ ವರ್ಷ ಸೇವೆ ನಡೆಸಿದರು. ಬಾಲಕ ಪಾತ್ರಗಳಿಂದ ಆರಂಭವಾದ ಅವರ ಕಲಾಜೀವನ ನಾಯಕ ಪಾತ್ರಗಳನ್ನು ಧರಿಸುವುದರ ವರೆಗೆ ಬಂತು. ಕೊನೆಯ ನಾಲ್ಕೈದು ವರ್ಷಗಳು ಬಸವರಾಜರು ಕಂಪೆ ನಿಯ ಪ್ರಧಾನ ಪಾತ್ರಧಾರಿಗಳಾಗಿ ಕಂಪೆನಿಗೆ ಕೀರ್ತಿ, ಧನ ಎರಡನ್ನೂ ಧಾರಾಳವಾಗಿ ಒದಗಿಸಿಕೊಟ್ಟರು. ವಾಮನರಾಯರು ಕೊನೆಗೆ ಕಂಪೆನಿ ಯನ್ನು ನಿಲ್ಲಿಸಿ ಬಿಡುವ ಯೋಚನೆ ಮಾಡಿ, ಬಸವಣ್ಣನವರಿಗೆ ಕಂಪೆನಿ ಯನ್ನು ಕೊಟ್ಟು ಬಿಡಲು ನಿಶ್ಚಯಿಸಿದರು. ಆದರೆ ಆಗ ಬಸವಣ್ಣಪ್ಪನವರು ಅಷ್ಟು ದೊಡ್ಡ ಜವಾಬ್ದಾರಿಯನ್ನು ಹೊರಲು ಸಿದ್ಧರಾಗಿರಲಿಲ್ಲ. ಕಂಪೆನಿ ಬೆಳಗಾಂವಿಯಲ್ಲಿ ತನ್ನ 'ಭರತವಾಕ್ಯ'ವನ್ನು ಹಾಡಿಬಿಟ್ಟಿತು.

ವಾಮನರಾಯರಲ್ಲಿ ಪ್ರಧಾನ ನಟಿಯಾಗಿದ್ದ ಗುಳೇದ ಗುಡ್ಡದ ಗಂಗೂಬಾಯಿಯವರು ತಮ್ಮ ಸ್ವಂತ 'ಕೃಷ್ಣ ಸಂಗೀತ ನಾಟಕ ಮಂಡಳಿ' ಯನ್ನಾರಂಭಿಸಿದರು. ಬೆಂಗಳೂರು ತುಲಸೀತೋಟದ ನಾಟಕಶಾಲೆಯಲ್ಲಿ ನಾಟಕ. ನಾಯಕ ಪಾತ್ರ ಧರಿಸಿದ್ದವರು ಉತ್ತರ ಕರ್ನಾಟಕದ ಒಬ್ಬ

ಪ್ರಸಿದ್ಧ ಸಂಗೀತ ವಿದ್ವಾಂಸರು. ಅವರು ರಂಗದಮೇಲೆ ಪ್ರವೇಶಿಸಿದ್ದು ಒಂದೇ ಸಲ—ಎರಡನೆಯ ಸಲ ಅವರು ರಂಗದ ಮೇಲೆ ಬರುವುದಕ್ಕೆ ಪ್ರೇಕ್ಷಕರು ಅವಕಾಶ ಕೊಡಲಿಲ್ಲ. ಹೊಸದಾಗಿ ಕಂಪೆನಿ ಮಾಡಿಕೊಂಡು ಬೆಂಗಳೂರಿಗೆ ಬಂದಿದ್ದ ಗಂಗೂಬಾಯಿಗೆ ದಿಕ್ಕು ತೋರಲಿಲ್ಲ. ಬಸವಣ್ಣಪ್ಪ ನವರಿಗೆ ಆಹ್ವಾನ ಹೋಯಿತು. ಅವರು ಬಂದರು. ಜತೆಯಲ್ಲಿ ಗಂಗೂ ಬಾಯಿಗೆ ಶುಕ್ರಮಹಾದೆಸೆಯನ್ನೂ ತಂದರು.

ಗಂಗೂಬಾಯಿಯ ಕಂಪೆನಿಯಲ್ಲಿ ಬಸವಣ್ಣಪ್ಪನವರೇ ಎಲ್ಲ ಪ್ರಧಾನ ಪಾತ್ರಗಳನ್ನು ಧರಿಸುತ್ತಿದ್ದರು. ಇವರ ಧೈರ್ಯಧರ (ಮಾನಾಪಮಾನ ನಾಟಕದಲ್ಲಿ) ಆನಂದ ಸೇಟ್ (ಸಂಶಯ ಸಾಮ್ರಾಜ್ಯದಲ್ಲಿ) ಜನರಿಗೆ ಅಚ್ಚು ಮೆಚ್ಚಾದವು. - ಗಂಗೂಬಾಯಿ ಸುಖವಾಗಿ ಹಾಡುತ್ತಿದ್ದಳು ಮತ್ತು ತನ್ನ ಪಾತ್ರವನ್ನು ಗಂಭೀರವಾಗಿ ನಿರ್ವಹಿಸುತ್ತಿದ್ದಳು. ಬಸವರಾಜರ ಪಾತ್ರ ತುಂಬಿ ಕಾಣುವುದಕ್ಕೆ ಉತ್ತಮ ನಾಯಕಿಯ ಸಹಕಾರವೂ ತಕ್ಕಮಟ್ಟಿಗೆ ಕಾರಣವಾಯಿತು.

ಸೊಲ್ಲಾಪುರದಲ್ಲಿ ಗಂಗೂಬಾಯಿ ಕಂಪೆನಿ ಬೀಡುಬಿಟ್ಟಿದ್ದಾಗ ಅದೇ ಕಾಲದಲ್ಲಿ ಅಲ್ಲಿಗೆ ಬಾಲಗಂಧರ್ವರ ಕಂಪೆನಿ ಬಂತು. ಬಾಲಗಂಧರ್ವರ ಕಂಪೆನಿಯವರು ಮಾನಾಪಮಾನ—ಸಂಶಯಕಲ್ಲೋಲ ನಾಟಕಗಳನ್ನು ಮರಾಟಿಯಲ್ಲಿ ಆಡುತ್ತಿದ್ದರು. ಗಂಗೂಬಾಯಿ ಕಂಪೆನಿಯವರು ಆಡುತ್ತಿದ್ದ ಅವೇ ನಾಟಕಗಳ ಭಾಷಾಂತರಗಳನ್ನು ನೋಡಿ ಅಚ್ಚರಿಗೊಂಡರು. ಇದೇ ಅನುಭವ ಹೀರಾಬಾಯಿ ಬರೋಡೆಕರ್ ಅವರಿಗೆ ವಿಜಾಪುರದಲ್ಲಿ ಆಯಿತು.

ಗಂಗೂಬಾಯಿಯವರ ಕಂಪೆನಿಯಲ್ಲಿದ್ದಾಗ ಬಸವರಾಜರು ತಮ್ಮ ಸಂಗೀತ ಅಧ್ಯಯನ ಮುಂದುವರಿಸುವ ಮೂರು ನಾಲ್ಕು ಅವಕಾಶ ದೊರೆಯಿತು. ಅಲ್ಲಾದಿಯಾ ಖಾನಸಾಹೇಬರ ಶಿಷ್ಯಂದಿರಲ್ಲಿ ಒಬ್ಬರಾದ ಗೋವಿಂದ ಸಾಲಿ ಗ್ರಾಮ ಬೂವಾ ಅವರಲ್ಲಿ ನಾಲ್ಕೈದು ತಿಂಗಳು ಪಾಠ ಸಾಗಿತು. ಬೆಂಗ ಳೂರಿನಲ್ಲಿ ಕಂಪೆನಿ ಬೀಡುಬಿಟ್ಟಿದ್ದಾಗ ಇಲ್ಲಿಯೇ ಇದ್ದ ತೇಂಬೆ ಗೋವಿಂದ ರಾಯರಿಂದ ನಾಟಕದ ಪದಗಳ ಸಶಾಸ್ತ್ರೀಯ ಪಾಠವಾಯಿತು. ಮೈಸೂರಿ ನಲ್ಲಿ ಕಂಪೆನಿ ಇದ್ದಾಗ ಆಸ್ಥಾನ ವಿದ್ವಾನ್ ವಾಸುದೇವಾಚಾರ್ಯರ ಕೈಯಲ್ಲಿ ಕೆಲಕಾಲ ಪಾಠವಾಯಿತು.

ಸುಮಾರು ೨ ವರ್ಷಕಾಲ ಗಂಗೂಬಾಯಿ ಕಂಪೆನಿಯಲ್ಲಿದ್ದಾನಂತರ ಕರ್ನಾಟಕದಲ್ಲಿ, ನವೀನ ರೀತಿಯಿಂದ ಹೊರಟಿದ್ದ ವಾಣೀ ವಿಲಾಸ ನಾಟ್ಯ ಸಂಸ್ಥೆಯಲ್ಲಿ ಪ್ರಧಾನ ಪಾತ್ರಧಾರಿಗಳಾಗಿ ಬಸವರಾಜರು ಹೋದರು. ೨॥ ವರ್ಷ ವಾಣೀವಿಲಾಸ ಕಂಪೆನಿಯಲ್ಲಿ ದುಡಿದುದಾಯಿತು. ವಾಣೀ ವಿಲಾಸ ಕಂಪೆನಿಯವರಾಡುತ್ತಿದ್ದ 'ಕಿತ್ತೂರು ರುದ್ರಮ್ಮ' ನಾಟಕದಲ್ಲಿ ಮಲಸರ್ಜ, 'ವಿಜಯನಗರ ಸಾಮ್ರಾಜ್ಯ ಸ್ಥಾಪನೆ' ನಾಟಕದಲ್ಲಿ ಹುಕ್ಕ, ವಿದ್ಯಾರಣ್ಯ ಪಾತ್ರಗಳಲ್ಲಿ ಬಸವರಾಜರು ತಮ್ಮದೇ ಆದ ವೈಶಿಷ್ಟ್ಯವನ್ನು ತೋರುತ್ತಿದ್ದರು. ಕಂಪೆನಿ ಗದುಗಿಗೆ ಹೋಗಿದ್ದಾಗ ಅಲ್ಲಿನ ರಸಿಕ ಮಹಾ ಜನಗಳು ದಿವಾನ್ ಬಹದ್ದೂರ್ ಮಾನ್ವಿ ಶಿವಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ಸೇರಿಸಿ ಬಸವರಾಜರಿಗೆ 'ನಟಶೇಖರ' ಎಂಬ ಬಿರುದನ್ನು ಉಚಿತ ಮರ್ಯಾದೆಗಳೊಡನೆ ಕೊಟ್ಟರು.

ವಾಣೀವಿಲಾಸ ಕಂಪೆನಿಯಲ್ಲಿ ಬಸವರಾಜರು ಇದ್ದಕಾಲದಲ್ಲಿ ಮಿರಜಿನ ನೀಲಕಂಠ ಬೂವಾ ಅವರನ್ನು ಕರೆಸಿಕೊಂಡು ಅವರಲ್ಲಿ ಒಂದು ವರ್ಷಕಾಲ ತಮ್ಮ ಸಂಗೀತ ವ್ಯಾಸಂಗವನ್ನು ಮುಂದುವರಿಸಿದರು.

ವಾಣೀವಿಲಾಸ ನಾಟಕ ಸಂಸ್ಥೆ ಕರ್ನಾಟಕ ರಂಗಭೂಮಿಯ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಅದರ ವೈಭವ, ಪ್ರದರ್ಶನ ವೈಶಿಷ್ಟ್ಯ ಭಾರತಕ್ಕೇ ಮೇಲ್ಪಂಕ್ತಿಯಾಗಿತ್ತು. ವಾದ್ಯಮೇಳದಲ್ಲಿ ೨ ಸಾರಂಗಿ, ೨ ಆರ್ಗನ್,—ಇತರ ವಾದ್ಯಗಳು ಇರುತ್ತಿದ್ದವು. ನಟವರ್ಗದಲ್ಲಿ ಹಂದಿಗನೂರು ಸಿದ್ದರಾಮಪ್ಪ, ಕರ್ನಾಟಕಿ ಗೋಹರ್. ಮಲ್ಲಿಕಾರ್ಜುನ ಮನಸೂರ್ ಅವರು, ಬಸವರಾಜರು ಇದ್ದರು. ೮೦–೮೫ ಜನ ಪಾತ್ರಾಭಿನಯಗಾರರಿದ್ದರು. ಇಂತಹ ಸಂಸ್ಥೆ ಅವ್ಯವಸ್ಥೆಯಿಂದ ಒಡೆದು ಹೋಯಿತು. ನಾಟಕ ರಂಗದ ಕಳಸವೇ ಕಳಚಿಬಿದ್ದಂತಾಯಿತು.

ವಾಣೀವಿಲಾಸ ಸಂಸ್ಥೆ ಮುರಿದ ಹೋದ ಮೇಲೆ ೧೯೩೫ರಲ್ಲಿ ಬಸವರಾಜರು ಮುಂಬಯಿಯ ಶಾರದಾ ಫಿಲ್ಮ್ ಕಂಪೆನಿಯ ಸಂಗೀತ ದಿಗ್ದರ್ಶಕರಾಗಿ ಹೋದರು. ಅಲ್ಲಿ ಒಂದು ವರ್ಷಕಾಲ ಇದ್ದರು. 'ರತ್ನಮಂಜರಿ', 'ರಾಜತರಂಗ', 'ಜಾನೆ ಆಲಮ್' ಮೂರು ಚಿತ್ರಗಳಿಗೆ ಸಂಗೀತದ

ದಿಗ್ದರ್ಶನ ಮಾಡಿದ್ದಲ್ಲದೆ ತಾವೂ ಪಾತ್ರವಹಿಸಿ ಒಂದೊಂದು ಚಿತ್ರದಲ್ಲಿ ೩-೪ ಹಾಡುಗಳನ್ನು ಹಾಡಿದ್ದಾರೆ.

ಶಾರದಾ ಫಿಲ್ಮ್ ಕಂಪೆನಿಯ ಇವರನ್ನು ದಿಗ್ದರ್ಶಕರನ್ನಾಗಿ ಆಯ್ದ ಪ್ರಸಂಗ ಸ್ವಾರಸ್ಯವಾಗಿದೆ. ಅದೇ ಕಾಲಕ್ಕೆ ಮದನರಾಜ ಹಂಸನೆಂಬ ಪಂಜಾಬೀ ಗಾಯಕ ಹುದ್ದೆಗಾಗಿ ಬಂದಿದ್ದ. ಮಾಲಿಕರಾದ ಭೋಗಿಲಾಲ ದವೆಯುವರು ಬಸವರಾಜರು ಮತ್ತು ಮದನರಾಜನನ್ನು ಪರೀಕ್ಷೆಗೆ ಹಚ್ಚಿದರು. ಬಸವರಾಜರ ಗಾನ—ಗಾನದ ರೀತಿ ದವೆಯುವರಿಗೆ ಮೆಚ್ಚಾಯಿತು. 'ಕಾನಡಿಯುವರು ಏನು ಹಾಡುತ್ತಾರೆ' ಎಂದು ಹೇಳುತಿದ್ದ ಮದನರಾಜ ಸ್ತಬ್ಧನಾದ.

ಬಸವರಾಜರ ಶೀಲ, ನಡೆನುಡಿ ಶಾರದಾಫಿಲ್ಮ್ ಕಂಪೆನಿಯಲ್ಲಿ ಅವರಿಗೆ ಉನ್ನತಸ್ಥಾನವನ್ನು ಗಳಿಸಿಕೊಟ್ಟಿದ್ದವು. ದಿಗ್ದರ್ಶಕರಾದ ಕೆ. ಪಿ. ಭಾವೆಯವರಂತೂ ಬಸವರಾಜರನ್ನು ಅಣ್ಣನಂತೆ ಕಾಣುತ್ತಿದ್ದರು.

ಬಸವರಾಜರು ಹೆಚ್ಚುಕಾಲ ಸಿನೀಮಾ ರಂಗದಲ್ಲಿ ನಿಲ್ಲಲಿಲ್ಲ. ನಾಟಕದ ಕರೆ ಬಂತು. ಬಸವರಾಜರು ತಮ್ಮ ಭದ್ರಸ್ಥಾನವನ್ನು ತ್ಯಜಿಸಿ ಕನ್ನಡ ರಂಗಭೂಮಿಯ ಸೇವೆಗೆ ಮರಳಿ ಬಂದರು. ಇಂದಿನವರೆಗೆ ಚಿತ್ರರಂಗದಲ್ಲಿಯೇ ಅವರು ಇದ್ದಿದ್ದರೆ ಭಾರತದ ಶ್ರೇಷ್ಠ ಚಲನಚಿತ್ರ ಸಂಗೀತ ದಿಗ್ದರ್ಶಕರಾಗುತ್ತಿದ್ದರು—ಸಾವಿರಾರು ರೂಪಾಯಿ ಗಳಿಸುತ್ತಿದ್ದರು. ಆದರೆ ಕನ್ನಡ ರಂಗಭೂಮಿಯ ಸೇವೆಗಾಗಿ ಅವುಗಳ ಬಲಿದಾನವನ್ನರ್ಪಿಸಲು ಹಿಂದೆ ಮುಂದೆ ನೋಡಲಿಲ್ಲ.

ಬಸವರಾಜರನ್ನು ಮುಂಬಯಿ ಬಿಡಿಸಿದುದು 'ವಿಶ್ವರಂಜನ ನಾಟ್ಯ ಸಂಸ್ಥೆ.' ಅದು ಜೀವಂತವಿದ್ದಷ್ಟು ಕಾಲ ಅದರಲ್ಲಿ ಮುಖ್ಯ ಪಾತ್ರ ಧರಿಸುತ್ತಿದ್ದರು. ಉಷಾ ಸ್ವಯಂಕರ ನಾಟಕದಲ್ಲಿ ಬಸವರಾಜರ ಅನಿರುದ್ಧನ ಪಾತ್ರ ನೋಡಿದವರ ಮನಸ್ಸಿನಲ್ಲಿ ಅಮರವಾಗಿ ಉಳಿಯಿತು.

ಉತ್ತರ ಕರ್ನಾಟಕದ ಕನ್ನಡಿಗರು 'ಚಿರಂಜೀವಿ' ಚಿತ್ರ ತೆಗೆಯುವ ಹಂಚಿಕೆ ಹೂಡಿದ್ದರು. ಬಸವರಾಜರು ಸಹಕರಿಸಿ ನಾರದನ ಪಾತ್ರವನ್ನು ನಿರ್ವಹಿಸಿದರು. ಅದರಲ್ಲಿ ಅವರು ಹಾಡಿರುವ ಎರಡು ಹಾಡುಗಳು ಸುಂದರವಾಗಿವೆ.

ಇಷ್ಟೆಲ್ಲ ಅನುಭವವಾದ ಮೇಲೆ ೧೯೩೮ ಏಪ್ರಿಲ್ ತಿಂಗಳಲ್ಲಿ ಬಸವರಾಜರು 'ಕಲಾ ಪ್ರಕಾಶನ ನಾಟಕ ಮಂಡಳಿ' ಎಂಬ ಹೆಸರಿನಲ್ಲಿ ಸ್ವಂತ ಕಂಪೆನಿಯನ್ನು ಸ್ಥಾಪಿಸಿ ನಡೆಸಿಕೊಂಡು ಬಂದಿದ್ದಾರೆ. ಉಷಾ ಸ್ವಯಂವರದಲ್ಲಿ ಅನಿರುದ್ಧ, ಚಿತ್ರಾಂಗದಾ ನಾಟಕದಲ್ಲಿ ಅರ್ಜುನ, ಕುರುಕ್ಷೇತ್ರದಲ್ಲಿ ಕೃಷ್ಣ, ಸಿದ್ಧರಾಮೇಶ್ವರದಲ್ಲಿ ಸಿದ್ಧರಾಮ ಪಾತ್ರಗಳು ಬಸವರಾಜರಿಗೆ ಮೀಸಲು. ಅವರು ಆ ಪಾತ್ರಗಳಿಗೆ ಮೀಸಲೆಂದರೂ ತಪ್ಪಲ್ಲ.

ಸ್ವಂತ ಕಂಪೆನಿಯೊಮ್ಮೆ ಸೊಲ್ಲಾಪುರದಲ್ಲಿದ್ದಾಗ ಅಲ್ಲಿ ಮರಾಟಿ ಕಂಪೆನಿಯೊಂದು ಬಂದು ಸ್ಪರ್ಧೆ ನಡೆಸಿತು. ಅವರು ದರ ಇಳಿಸಿದರು, ಬಸವರಾಜರು ಎಂದಿನಂತೆ ಸಾಗಿದ್ದರು. ಒಂದೆರಡು ವಾರ ಸ್ಪರ್ಧೆ ಹೂಡಿ ಕೊನೆಗೆ ಮರಾಟಿ ಕಂಪೆನಿ ಸೊಲ್ಲಾಪುರದಿಂದ ಕಂಬಿ ಕೀಳಬೇಕಾಯಿತು. ೧೯೪೭ರಲ್ಲಿ ಬಸವರಾಜರ ಕಂಪೆನಿ ರಾಣಿಬೆನ್ನೂರಿನಲ್ಲಿದ್ದಾಗ ಅಲ್ಲಿನ ಮಹಾಜನಗಳು ಸಭೆ ಸೇರಿಸಿ ಒಂದು ನಿಧಿಯನ್ನರ್ಪಿಸಿ 'ನಟಭೂಷಣ' ಎಂಬ ಬಿರುದನ್ನೂ ದಯೆಪಾಲಿಸಿದರು.

ಇಂದು ಅನೇಕ ಕಷ್ಟ ನಷ್ಟಗಳನ್ನು ಸಹಿಸಿಕೊಂಡು ಬಸವರಾಜರು ಕಂಪೆನಿಯನ್ನು ನಡೆಸಿದ್ದಾರೆ. ೫೦—೬೦ ಜನರ ರಕ್ಷಣೆ ಪೋಷಣೆಗಳ ಭಾರವನ್ನು ನಿರ್ವಹಿಸುತ್ತಿದ್ದಾರೆ. ಹೊಸ ನಾಟಕಗಳನ್ನು, ಹೊಸ ರೀತಿಯಲ್ಲಿ ಪ್ರದರ್ಶಿಸಬೇಕೆಂದು ಹಂಬಲಿಸುತ್ತಾರೆ. ಆದರೆ ಕನ್ನಡ ಶ್ರೀಮಂತರಿಗೆ ಕಲಾಭಿಮಾನವಿಲ್ಲ. ಬಸವರಾಜರಂತಹ ಸದ್ಗುಣ ಸಂಪನ್ನ ಕಲಾವಿದನನ್ನು ಆದರಿಸಿ ಪ್ರೋತ್ಸಾಹಿಸುವ ಮನೋಭಾವವಿಲ್ಲ. ಕರ್ನಾಟಕದ ದುರ್ದೈವ.

ಕೋಮಲ ಪಾತ್ರಗಳನ್ನು ನಿರ್ವಹಿಸುವುದರಲ್ಲಿ ಬಸವರಾಜರದು ಎತ್ತಿದ ಕೈ. ಅವರ ಮಾತುಗಳಲ್ಲಿ ಅಭಿನಯದಲ್ಲಿ ಒಂದು ಉದಾತ್ತಜೀವನ ಹೊರಸೂಸುತ್ತದೆ. ಇವರ ಕೃಷ್ಣನ ಪಾತ್ರ 'ನಭೂತೋ ನಭವಿಷ್ಯತಿ.'

ಉತ್ತರ ಕರ್ನಾಟಕದ ರಂಗಭೂಮಿಯ ಮೇಲೆ ಬಸವರಾಜರ ಹಾಗೆ ಸಶಾಸ್ತ್ರೀಯವಾಗಿ ಸುಮಧುರವಾಗಿ ಹಾಡುವವರು ಯಾರೂ ಇಲ್ಲ. ನಾಟಕ ಜನರಂಜನೆಯನ್ನುಂಟುಮಾಡಬೇಕಾದರೆ ಕೀಳು ಸಂಗೀತವನ್ನೇ ಹಾಕಬೇಕೆಂದು ವಾದ ಮಾಡುವವರಿಗೆ ಬಸವರಾಜರ ನಾಟಕ ದೊಡ್ಡ ಮಾರುತ್ತರ.

ಬಸವಣ್ಣಪ್ಪನವರ ಶೀಲಕ್ಕೊಪ್ಪುವ ಮೂರು ಪಾತ್ರಗಳಲ್ಲಿ ಅವರನ್ನು ನೋಡಬೇಕೆಂದು ನನ್ನ ಹೆಬ್ಬಯಕೆ. ಬಸವಣ್ಣನವರು–ಕನಕದಾಸರು–ವಿದ್ಯಾರಣ್ಯರು. ಕನ್ನಡನಾಡಿನ ವಿಭೂತಿಪುರುಷರನ್ನು ಯೋಗ್ಯ ರೀತಿಯಲ್ಲಿ ರಂಗದ ಮೇಲೆ ತರಬಲ್ಲವರು ಬಸವರಾಜರು. ಮರಾಟಿ ನಾಟಕಗಳ ಅನುವಾದಗಳನ್ನಾಡುವ ಕಾಲ ಉತ್ತರ ಕರ್ನಾಟಕದಲ್ಲಿ ಮುಗಿದು ಸ್ವತಂತ್ರ ನಾಟಕಗಳ ಯುಗ ಆರಂಭವಾಗಬೇಕು. ಬಸವರಾಜರಂತಹ ಪ್ರತಿಭಾವಂತ ನಟರು ಈ ಕೆಲಸಕ್ಕೆ ಸಿದ್ಧರಾಗಿದ್ದಾರೆ. ಆದರೆ ನೆರವು ಬೇಕು. ಕನ್ನಡ ಜನ ಕಣ್ತೆರೆದು ನೋಡಬೇಕು.

ಮಹಾಸಾಧಕರೂ, ಮುಕ್ತಜೀವಿಗಳೂ ಆದ ಬಸವರಾಜರ ಸೇವೆ ಇದಕ್ಕೂ ಅಧಿಕವಾಗಿ ನಡೆದು, ಕನ್ನಡ ಜನ ಅವರ ಪ್ರತಿಭೆ, ಶೀಲ, ಸೇವೆಯನ್ನು ಚಿರಕಾಲ ನೆನಸುವಂತಾಗಲೆಂದು ಹಾರೈಸುತ್ತೇನೆ.

೧೮–೪–೧೯೪೬

———



ಜಿ. ಎಚ್. ವೀರಣ್ಣ

[ಪುಟ ೧೧೪



ಬ್ರಾಹ್ಮಣನ ಪಾತ್ರದಲ್ಲಿ ವೀರಣ್ಣ

ಪುಟ ೧೧೫]

## ೧೬. ನಾಟಕರತ್ನ ಗುಬ್ಬಿ ವೀರಣ್ಣನವರು

ಕನ್ನಡಿಗರು ಸಾಹಸಿಗಳಲ್ಲವೆಂಬ ಆಕ್ಷೇಪ ಅವರ ಮೇಲೆ ಬಹಳ ದಿವಸಗಳಿಂದ ಇದೆ. ಆಕ್ಷೇಪದಲ್ಲಿ ಸತ್ಯವಿಲ್ಲದಿಲ್ಲ. ಇದಕ್ಕೆ ಕಾರಣ ಕರ್ನಾಟಕದ ಪ್ರಕೃತಿಶ್ರೀಯೂ ಕಾರಣ. ತಕ್ಕಮಟ್ಟಿಗೆ ಎಲ್ಲರ ಉದರ ಪೋಷಣೆಯನ್ನು ನೋಡಿಕೊಳ್ಳುವ ಕನ್ನಡ ತಾಯಿ ತನ್ನ ಮಕ್ಕಳನ್ನು ಮನೆಮೂಳರನ್ನಾಗಿಯೂ ಮಾಡಿದ್ದಾಳೆ. ಆದರೆ ಈ ಸ್ಥಿತಿಯನ್ನು ದಾಟಿ ಅಖಿಲ ಭಾರತದಲ್ಲಿ ತಮ್ಮ ಕೀರ್ತಿಯನ್ನು ಸ್ಥಾಪಿಸಿರುವ ಕೆಲವು ಕನ್ನಡಿಗರಿದ್ದಾರೆ. ಅವರಲ್ಲಿ ವೀರಣ್ಣನವರಿಗೆ ಸ್ಥಾನ.

ವಿದ್ಯಾ, ಸಂಪತ್ತು, ಹಿರಿಯರ ನೆರವು ಎಲ್ಲವುಗಳ ಆಶ್ರಯದಲ್ಲಿ ಮುಂದೆ ಬಂದವರಿದ್ದಾರೆ. ಆದರೆ ಯಾವ ಆಶ್ರಯವೂ ಇಲ್ಲದೆ ಸ್ವಸಾಮರ್ಥ್ಯದಿಂದ ಉನ್ನತ ಸ್ಥಾನವನ್ನಡರಿರುವವರು ತೀರ ವಿರಳ. ವೀರಣ್ಣನವರು ಆ ವಿರಳರ ಗುಂಪಿಗೆ ಸೇರತಕ್ಕವರು. ಅವರ ಚರಿತ್ರೆ ಸಾಹಸಜೀವನದ ಒಂದು ಮಹಾಕಾವ್ಯ. ಅವರ ಸಾಧನೆ ಒಂದು ಭವ್ಯ ತಪಸ್ಸು.

ಹದಿಮೂರು ರೂಪಾಯಿ ಸಂಬಳ ಪಡೆಯುವ ಸರ್ಕಾರಿ ನೌಕರನನ್ನೂ ಸಮಾಜದ ಗಣ್ಯ ಪುರುಷನೆಂದು ಭಾವಿಸುವ ದೇಶದಲ್ಲಿ ಲೋಕನಿಂದೆಗೆ ಗುರಿಯಾದ ನಾಟಕವೃತ್ತಿಯನ್ನವಲಂಬಿಸಿ ಧನ, ಮಾನ, ಪ್ರತಿಷ್ಠೆಗಳನ್ನು ಸೂರೆಗೊಂಡಿರುವ ವೀರಣ್ಣನವರು ಸ್ವತಂತ್ರ ಜೀವನದ—ಸಾಧನಯೋಗದ ಮಹತ್ವವನ್ನು ಸಾರಿದ್ದಾರೆ.

೧೮೮೮ರಲ್ಲಿ ಸ್ಥಾಪಿತವಾಗಿ ನಡೆದು ಬಂದಿದ್ದ ಚಂದಣ್ಣನವರ ಶ್ರೀ ಬಸವೇಶ್ವರಸ್ವಾಮಿ ಕೃಪಾಪೋಷಿತ ನಾಟಕ ಮಂಡಳಿಯಲ್ಲಿ ವೀರಣ್ಣನವರ ಚಿಕ್ಕಪ್ಪ ವ್ಯವಸ್ಥಾಪಕರಾಗಿದ್ದರು. ನಿರಾಶ್ರಿತನಾದ ಈ ಅನಾಥ ಬಾಲಕನನ್ನು ಚಿಕ್ಕಪ್ಪ ಆತನ ಆರನೆಯ ವರ್ಷದಲ್ಲಿ ಕಂಪೆನಿ ಸೇರಿಸಿದರು. ಸಣ್ಣಪುಟ್ಟ ಪಾತ್ರಗಳು, ಹೆಣ್ಣು ಪಾತ್ರಗಳು ಅವರ ಪಾಲಿಗೆ ಬಂದಿತ್ತು. ಬಾಲಕನಿಗೆ ವಯಸ್ಸಾಯಿತು. ವಯೋಧರ್ಮಕ್ಕನುಗುಣವಾಗಿ ಶಾರೀರ (ಧ್ವನಿ) ಗಡಸಾಯಿತು. ಹೆಣ್ಣು ಪಾತ್ರಕ್ಕೆ ಅನರ್ಹನೆಂದು ನಿಶ್ಚಯವಾಗಿ ರಂಗವನ್ನು ಬಿಟ್ಟು ಕಂಪೆನಿಯ ಉಳಿದ ಕೆಲಸಕಾರ್ಯಗಳಿಗೆ ಬಾಲನಟ ನಿಯೋಜಿಸಲ್ಪಟ್ಟ. ನಟನಾಗಿದ್ದವನಿಗೆ ಬಾಗಿಲು ಕಾಯುವ ಕೆಲಸ ವಿಧಾಯಕವಾದರೆ ಅವನ ಸ್ಥಿತಿಯೇನಾಗಬಹುದೆಂಬುದನ್ನು ವಿಸ್ತರಿಸಬೇಕಾಗಿಲ್ಲ. ಆದರೆ ವಿಧಿಯಿಲ್ಲ. ಬರಿದೊಡಲು ತುಂಬಬೇಕಾಗಿತ್ತು.

ಅದೃಷ್ಟವೆಂಬ ಅವ್ಯಕ್ತ ಅದೃಶ್ಯ ಶಕ್ತಿಯೊಂದು ಎಲ್ಲರ ಪಾಲಿಗೂ ಇದೆಯೋ ಇಲ್ಲವೋ! ಆದರೆ ವೀರಣ್ಣನವರ ಬಾಳಿನ ಧ್ರುವತಾರೆಯೇ ಅದೃಷ್ಟ. ಆದವಾನಿ ಹತ್ತಿರ ಒಳಗುಂದ ಎಂಬ ಹಳ್ಳಿ. ಅಲ್ಲಿ ಚಂದಣ್ಣನವರ ಕಂಪೆನಿಯ ನಾಟಕಗಳು. ಅಕಸ್ಮಾತ್ತಾಗಿ ಸದಾರಮೆ ನಾಟಕದಲ್ಲಿ ಕಳ್ಳನ ಪಾತ್ರ ವಹಿಸುತ್ತಿದ್ದ ನಟ ಕಾಹಿಲೆ ಬಿದ್ದ. ವೀರಣ್ಣನವರಿಗೆ ಆ ಪಾತ್ರ ಅಭಿನಯಿಸುವ ಅವಕಾಶ ಸಿಕ್ಕಿತು. ಅಂದು ಅವರು ತೋರಿದ ನಟನಾಸಾಮರ್ಥ್ಯ ಅವರ ಬಾಳನ್ನು ರೂಪಿಸಿಬಿಟ್ಟಿತು. ಕಳ್ಳನ ಪಾತ್ರ ವೀರಣ್ಣನವರಿಗೆ ಮೀಸಲಾಯಿತು. ವೀರಣ್ಣನವರು ಅಂದು ರಂಗವೇದಿಕೆಯನ್ನು ಮರಳಿ ಹತ್ತಿ ಅಲ್ಲಿ ಭದ್ರವಾಗಿ ನಿಂತರು.

ಆ ಕಾಲದ ನಾಟಕ, ಪ್ರೇಕ್ಷಕರು, ನಟರು ಇವರ ಪರಿಸ್ಥಿತಿಯನ್ನು ಕುರಿತು ವೀರಣ್ಣನವರೇ ಬಹಳ ಸ್ವಾರಸ್ಯವಾಗಿ ಹೇಳಿದ್ದಾರೆ.

"ಆಗ ನಾಟಕ ಸಂಸ್ಥೆಗಳ ಸಲಕರಣೆಗಳೆಂದರೆ ಒಂದು ಡೇರಾ, ಐದಾರು ಪರದೆಗಳು ಇಷ್ಟು ಮಾತ್ರ. ಎಷ್ಟೇ ದೊಡ್ಡ ಕಂಪನಿಯೆಂದರೂ ಮೂವತ್ತು ಜನರಿಗೆ ಮೇಲ್ಪಟ್ಟು ಜನರಿರುತ್ತಿರಲಿಲ್ಲ. ಅವರ ವೇತನ ರಾಜಾ ಪಾರ್ಟಿಗೆ ೧೫. ಉಳಿದವರಿಗೆ ಚೌತಿ ಪಂಚಮಿ ಈ ರೀತಿ. ನಮ್ಮ ಕಂಪನಿ ಸಲಕರಣೆಗಳೆಲ್ಲವೂ, ೯ ಎತ್ತಿನ ಗಾಡಿಗಳಲ್ಲಿ ತುಂಬುತ್ತಿತ್ತು. ಈ ರಾತ್ರಿ

ಒಂದು ಸ್ಥಳವನ್ನು ಬಿಟ್ಟರೆ ನಾಳೆ ರಾತ್ರಿಯೇ ಇನ್ನೊಂದು ಕಡೆ ನಾಟಕ ಮಾಡುತ್ತಿದ್ದೆವು. ಸಂಸ್ಥೆಯ ನಟರೆಲ್ಲರೂ ಹಾರೆಗಳನ್ನು ಹಿಡಿದು ಕುರ್ಚಿ ಗುಂಡಿತೋಡಿ ಡೇರಾ ಹಾಕಬೇಕಾಗಿತ್ತು.

"ಆಗಿನ ರಂಗ ಸಲಕರಣೆಗಳಾದರೋ ಇನ್ನೂ ವಿಚಿತ್ರ. ಸೀಮೆಎಣ್ಣೆ ಟಿನ್ನುಗಳ ಮೇಲೆ ಹಲಿಗೆ ಜೋಡಿಸಿ, ಆಸ್ಪತ್ರೆ ಕೆಂಪು ಬ್ಲಾಂಕೆಟ್ ಹಾಸಿ ದರೆ ಆದೇ ಸಿಂಹಾಸನ. ಎಲ್ಲಾ ಪಾತ್ರಗಳಿಗೂ ಒಂದೇ ಬಗೆಯ ಉಡುಪು. ಮಾತಿನಿಂದ ಅವನೇನು ರಾಜನೋ ದಾಸನೋ ಎಂಬುದನ್ನು ತಿಳಿಯ ಬೇಕಾಗಿತ್ತು.

"ನಾನು ಚಿಕ್ಕವನಾಗಿದ್ದಾಗ ನಾಟಕಗಳಿಗೆ ನೋಟೀಸ್ ಹೊಡೆಸುವ ಪದ್ಧತಿಯೇ ಇಲ್ಲ. ತಮಟೆ ಹೊಡೆಸಿ ಸಾರುತ್ತಿದ್ದರು. ಆ ಮೇಲೆ ಬೆಂಗ ಳೂರಿನಿಂದ ನಾಟಕದ ಹೆಸರಿಗೆ ಸ್ಥಳ ಬಿಟ್ಟು ನೋಟೀಸುಗಳನ್ನು ಅಚ್ಚು ಹಾಕಿಸಿ ತರಿಸಿ ಅದರ ಮೇಲೆ ನಾಟಕದ ಹೆಸರುಗಳನ್ನು ಬರೆದು ಹಂಚು ವುದು ರೂಢಿಗೆ ಬಂತು. ನಾಟಕದ ಮಾಲಿಕರು ನೋಟೀಸುಗಳನ್ನು ತಮ್ಮ ಪೆಟ್ಟಿಗೆಯಲ್ಲಿಟ್ಟು ಕಾಪಾಡುತ್ತಿದ್ದರು. ಒಂದು ಕ್ಯಾಂಪಿಗೆ ಹತ್ತು ಹನ್ನೆರಡಕ್ಕಿಂತ ಹೆಚ್ಚು ನೋಟೀಸುಗಳು ಖರ್ಚಾಗುತ್ತಿರಲಿಲ್ಲ.

"ಇನ್ನು ಗ್ರೀನ್ ರೂಮಿನಲ್ಲೊಂದು ಜಾಕಾಯಿ ಪೆಟ್ಟಿ, ಲ್ಯಾಂಪು, ರಾಜಾಪಾರ್ಟಿನವರಿಗೆ ಒಂದಾಣೆ ಕನ್ನಡಿ, ಉಳಿದವರಿಗೆ ಕಾಲಾಣೆ ಕನ್ನಡಿ ಹರಿದಳ, ಇಂಗಳೀಕ, ಅಭ್ರಕ ಇವೇ ಆಗಿನವರು ಉಪಯೋಗಿಸುತ್ತಿದ್ದ ಬಣ್ಣಗಳು. ಮೊದಮೊದಲು ಸೀಮೆಯೆಣ್ಣೆಯ ಲ್ಯಾಂಪುಗಳನ್ನಿಟ್ಟು ಕೊಂಡು ಆಡುತ್ತಿದ್ದೆವು. ಆ ಮೇಲೆ ದೊಡ್ಡ ದೊಡ್ಡ ಲ್ಯಾಂಪುಗಳು, ಗ್ಯಾಸ್ ಲೈಟುಗಳು ಪ್ರಚಾರಕ್ಕೆ ಬಂದವು.

"ಅಂದಿನ ನಾಟಕಗಳೆಂದರೆ, ಚೋರಕಥೆ, ಪ್ರಭಾವತೀ ದರ್ಬಾರ್, ಧರ್ಮಪಾಲ ಚರಿತ್ರೆ, ಪಾಂಡವ ವಿಜಯ ಇತ್ಯಾದಿಗಳು ಒಂದೊಂದು ನಾಟಕದಲ್ಲೂ ೮೦—೧೦೦ ಹಾಡುಗಳೂ ೨೦—೩೦ ಕಂದಗಳು ಇರು ತ್ತಿದ್ದುವು. ಪ್ರತಿ ನಾಟಕದಲ್ಲೂ ರಾಜ ಮಂತ್ರಿ ಸೇನಾಪತಿ ಈ ತ್ರಿಮೂರ್ತಿ ಗಳ ಪ್ರವೇಶ ಮೊದಲು ಆಗಬೇಕಾಗಿತ್ತು. ಅವರ ಮಾತುಕಥೆ ಯೋಗ ಕ್ಷೇಮವೆಲ್ಲ ಹಾಡುಗಳಲ್ಲೇ ನಡೆಯುತ್ತಿತ್ತು. ಹಾಡು ಮುಗಿದ ಮೇಲೆ

‘ಈ ರೀತಿಯಿದೆ’ ಎಂದು ಹೇಳುವುದು ಆಗ ನಟನಿಗೆ ಒಂದು ದೊಡ್ಡ ಭೂಷಣ.

“ಮೊದಲು ನಾವು ಉಪಯೋಗಿಸುತ್ತಿದ್ದ ವಾದ್ಯಗಳು ಪಿಟೀಲು, ಪುಂಗಿ, ಮುಖ ವೀಣೆ. ಆಮೇಲೆ ಜಾಕಾಯಿ ಪೆಟ್ಟಿಯಲ್ಲಿ ಮಾಡಿದ ಸೋಟಾ ಎಂಬ ಒಂದು ತರಹೆ ತಂಬೂರಿ ಪ್ರಚಾರಕ್ಕೆ ಬಂತು. ಆಗ ಎಲ್ಲರಿಗೂ ಒಂದೇ ಶ್ರುತಿ. ಈಗಿನಂತೆ ಗುಣ ಧರ್ಮಾನುಸಾರ ಶ್ರುತಿಗಳನ್ನು ಬದಲಾಯಿಸು ತ್ತಿರಲಿಲ್ಲ. ಬರುಬರುತ್ತಾ ಹಾರ್ಮೋನಿಯಂ ತಬಲಾ ಪ್ರಚಾರಕ್ಕೆ ಬಂದವು.

“ನಾವು ಕುರ್ಚಿ ಗುಂಡಿಗಳನ್ನೇನೋ ಅಗೆಯುತ್ತಿದ್ದೆವಷ್ಟೆ. ಆದರೆ ನಮ್ಮಲ್ಲಿ ಒಂದು ಕುರ್ಚಿ ಕೂಡಾ ಇರುತ್ತಿರಲಿಲ್ಲ. ಯಾರೂ ಕುರ್ಚಿ ಟಿಕೇಟು ತೆಗೆದುಕೊಳ್ಳುತ್ತಿರಲಿಲ್ಲ. ಒಂದೊಂದು ಸಾರಿ ಕಂಪೆನಿ ಮಾಲೀ ಕರು ತಾಲ್ಲೂಕು ಅಮಲ್ದಾರರನ್ನು ಕಂಡು ನಾಟಕಕ್ಕೆ ದಯಮಾಡಿಸ ಬೇಕೆಂದು ಕರೆಯುತ್ತಿದ್ದರು.

“ಅಮಲ್ದಾರರೇನಾದರೂ ನಾಟಕಕ್ಕೆ ಬರಲೊಪ್ಪಿದರೆ, ಮಾಲೀಕರು ‘ಹಾಗೆ ಅಮ್ಮಾವರನ್ನೂ ಕರೆದುಕೊಂಡು ಬನ್ನಿ, ಕೂತ್ಕೊಳ್ಳೋದಕ್ಕೆ ಕುರ್ಚಿ ಗಳನ್ನೂ ತನ್ನಿ’ ಎಂದು ಹೇಳಬೇಕಾಗಿತ್ತು. ಅಮಲ್ದಾರರು ಅಮ್ಮನವರ ಸಂಗಡ ಕುರ್ಚಿಗಳನ್ನು ಹೊರೆಸಿಕೊಂಡು ಬಂದು, ನಾಟಕನೋಡಿ ಹೋಗು ತ್ತಿದ್ದರು.”

ಇಂತಹ ವಿಚಿತ್ರ ಸ್ಥಿತಿಯಲ್ಲಿದ್ದ ಕಂಪೆನಿ ಹಳ್ಳಿಪಳ್ಳಿಗಳ ಜಾತ್ರೆಗಳನ್ನು ಬಿಟ್ಟು ಹೊರಬರುತ್ತಿರಲಿಲ್ಲ. ೧೯೧೩ರಲ್ಲಿ ಧೈರ್ಯಮಾಡಿ, ಮೈಸೂರಿಗೆ ಮೊದಲನೆಯ ಸಲ ಕಂಪೆನಿ ಬಂತು. ಅಲ್ಲಿಯೂ ‘ಸದಾರಮೆ’ ನಾಟಕ. ವೀರಣ್ಣನವರು ಕಳ್ಳನ ಪಾತ್ರ ಧರಿಸಿದ್ದರು. ಮೈಸೂರಿನ ಜನ ‘ಕಳ್ಳ’ ನನ್ನು ನೋಡಿ ಮರುಳಾದರು. ತಮ್ಮ ಅಭಿನಯ ಹಳ್ಳಿಯ ಜನಕ್ಕೆ ಮಾತ್ರವೇ ಅಲ್ಲ ದಿಳ್ಳಿಯ ಜನಕ್ಕೂ ಹಿಡಿಸುತ್ತದೆಂಬ ನಂಬಿಕೆ, ಧೈರ್ಯ ವೀರಣ್ಣನವರಲ್ಲಿ ಉತ್ಪನ್ನವಾಯಿತು. ಕಂಪೆನಿ ನಾಟಕಗಳ ಎಲ್ಲ ಹಾಸ್ಯ ಪಾತ್ರಗಳೂ ವೀರಣ್ಣನವರ ಪಾಲಿಗೆ ಬಂದವು. ೧೯೧೭ರಲ್ಲಿ ಚಂದಣ್ಣನವರ ಕಂಪೆನಿ ವೀರಣ್ಣನವರ ಕೈಗೆ ಬಂತು. ಅವರು ಮಾಲಿಕರಾದಾಗ ವಯಸ್ಸು ೨೬.

ವೀರಣ್ಣನವರು ಹಳೆಯ ನಾಟಕಗಳಲ್ಲಿಯೇ ತೃಪ್ತರಾಗದೆ 'ಪ್ರಭಾಮಣಿ ವಿಜಯ', 'ಕೃಷ್ಣಲೀಲೆ', 'ಕಂಸವಧಾ', 'ರುಕ್ಮಿಣಿ ಹರಣ', 'ಕಬೀರದಾಸ್' ನಾಟಕಗಳನ್ನು ಹೊಸದಾಗಿ ಬರೆಸಿ ರಂಗದ ಮೇಲೆ ತಂದರು. ೧೯೨೧ರಲ್ಲಿ ಮೊದಲನೆಯ ಸಾರಿ ಬೆಂಗಳೂರಿಗೆ ಬಂದು ತಮ್ಮ ನಾಟಕಗಳನ್ನು ಪ್ರದರ್ಶಿಸಿದರು. ಆಗಲೇ ಮಹಾಜನರಿಂದ 'ವಿನೋದ ರತ್ನಾಕರ' ಪ್ರಶಸ್ತಿಯೂ, ಆಳಿದ ಮಹಾಸ್ವಾಮಿಯವರಿಂದ 'ವರ್ಸ್‌ಟೈಲ್ ಕಮೆಡಿಯನ್' ಪ್ರಶಸ್ತಿಯೂ ಲಭಿಸಿದವು.

ಕಲಾವಿದರೂ, ದಕ್ಷ ಕಲಾವಿಮರ್ಶಕರೂ ಆದ ಮಹಾಸ್ವಾಮಿಯವರು ವೀರಣ್ಣನವರನ್ನು ಬರಮಾಡಿಕೊಂಡು, ಅವರ ಹಾಸ್ಯ ಪಾತ್ರಗಳನ್ನೆಲ್ಲಾ ನೋಡಿ ಸಂತೋಷಪಟ್ಟು, ಅವರ ವಿವಿಧ ಪಾತ್ರ ನಿರೂಪಣಾವೈಖರಿಯನ್ನು ಮೆಚ್ಚಿ 'ವರ್ಸಟೈಲ್ ಕಮೆಡಿಯನ್' ಎಂದು ಕರೆದರು.

ನಾಟಕದಲ್ಲಿ ಅದು 'ಕಬೀರದಾಸ'ನ 'ಯುಗ ಪ್ರಧಾನಪಾತ್ರಗಳಿಗೆ ಉತ್ತಮ ನಟರನ್ನು ಕೂಡಿಸಿ, ತಾವು ಅದರಲ್ಲಿ ಕಾಕೋದರನ ಪಾತ್ರವನ್ನು ವೀರಣ್ಣನವರು ಅಭಿನಯಿಸುತ್ತಿದ್ದರು. ಎಲ್ಲಿ ನೋಡಿದರೂ ಕಬೀರ್ ದಾಸ್ ನಾಟಕದ ಖ್ಯಾತಿ. ನಾಟಕ ೧೯೨೪ರಲ್ಲಿ ಚಲನಚಿತ್ರವಾಗಿ ವಿಶೇಷ ಕೀರ್ತಿಯನ್ನು ಗಳಿಸಿತು.

ವೀರಣ್ಣನವರು ಬಾಲನಟರನ್ನು ಕೂಡಿಸಿ ೧೯೨೫ರಲ್ಲಿ ಒಂದು ಶಾಖೆಯನ್ನು ಆರಂಭಿಸಿದರು. ಅವರಿಗಾಗಿ ಪ್ರತ್ಯೇಕ ನಾಟಕಗಳನ್ನು ಬರೆಸಿದರು. ತಾವು ಅಭಿನಯಿಸುತ್ತಿದ್ದ ದೊಡ್ಡ ಕಂಪೆನಿಯಲ್ಲಿ 'ಕರ್ನಾಟಕ ಸಾಮ್ರಾಜ್ಯ', 'ಸ್ವಾಮಿನಿಷ್ಠೆ', 'ಸುರಾಮಹಿಮೆ' ಮೊದಲಾದ ಹೊಸ ನಾಟಕಗಳನ್ನು ಬರೆಸಿ ರಂಗಪ್ರದರ್ಶನಕ್ಕೆ ಅಳವಡಿಸಿದರು.

ವೀರಣ್ಣನವರು ಧೈರ್ಯಮಾಡಿ ತಮಿಳುನಾಡಿನ ಪ್ರವಾಸವನ್ನು ಕೈಗೊಂಡರು. ತಮಿಳು ಸಂಸ್ಕೃತಿಯ ಕೇಂದ್ರಗಳಲ್ಲಿ ಕನ್ನಡ ನಾಟಕಗಳನ್ನಾಡಿ ಕನ್ನಡನಾಡಿನ ಕೀರ್ತಿ ವಿಸ್ತರಿಸುವಂತೆ ಮಾಡಿ ಬೆಂಗಳೂರಿಗೆ ಹಿಂದಿರುಗಿದಾನಂತರ ೧೯೬೪ರಲ್ಲಿ ತಮ್ಮ 'ಚಿನ್ನದ ಹಬ್ಬ'ವನ್ನು ವಿಶೇಷ ವಿಜೃಂಭಣೆಯಿಂದ ನೆರವೇರಿಸಿದರು. ಆಗಿನ ಸಂದರ್ಭವನ್ನು ವೀರಣ್ಣನವರು ಈ ರೀತಿ ವರ್ಣಿಸಿದ್ದಾರೆ.

“೧೯೩೨ರಲ್ಲಿ ವಾಕ್‌ಚಿತ್ರಗಳು ಪ್ರಚಾರಕ್ಕೆ ಬಂದಮೇಲೆ ನಾಟಕ ಸಂಸ್ಥೆಗಳ ಪರಿಸ್ಥಿತಿ ಸ್ವಲ್ಪ ಕಷ್ಟವಾಯಿತು. ಜನರ ಮನಸ್ಸು ಟಾಕೀಗಳ ಕಡೆ ತಿರುಗಿತು. ಆ ಎರಡು ವರ್ಷಗಳಲ್ಲಿ ನಮ್ಮ ಸಂಸ್ಥೆಗೆ ಸುಮಾರು ಮೂವತ್ತು ಸಹಸ್ರ ರೂಪಾಯಿಗಳು ನಷ್ಟವಾಯಿತು. ನಾನು ಯೋಚಿಸ ತೊಡಗಿದೆ, ಸಂಸ್ಥೆ ಉಳಿಯುವುದು ಹೇಗೆ ಎಂದು. ಒಂದೊಂದು ವಾಕ್ಚಿತ್ರಕ್ಕೆ ೫೦–೬೦ ಸಹಸ್ರ ರೂಪಾಯಿ ಖರ್ಚಾಗುವಾಗ ನಾವು ಹಿಂದಿನಂತೆ ನಾಟಕ ಮಾಡುವುದು ಸಾಧ್ಯವಿಲ್ಲವೆಂದು ತೋರಿತು. ಅಧಿಕ ಧನವ್ಯಯದಿಂದ ರಂಗೋಪಕರಣಗಳನ್ನು ಸಿದ್ಧಪಡಿಸಿ ಪ್ರಸಿದ್ಧ ನಾಟಕವೊಂದನ್ನು ಅಭಿನಯಿಸುವುದರಿಂದ ಜನರನ್ನು ಮೆಚ್ಚಿಸಬಹುದೇ ಎಂದು ತೋರಿತು. ಆದರಂತೆ ೬೦ ಸಹಸ್ರ ರೂಪಾಯಿಗಳನ್ನು ವೆಚ್ಚಮಾಡಿ ರಂಗೋಪಕರಣಗಳನ್ನು ರಚಿಸಿ ಸಂಸ್ಥೆಯ ಸುವರ್ಣ ಮಹೋತ್ಸವ ಸಮಾರಂಭದಲ್ಲಿ ಕುರುಕ್ಷೇತ್ರ ನಾಟಕವನ್ನು ಪ್ರಾರಂಭಿಸಿದೆವು. ಬೆಂಗಳೂರು ನಗರದಲ್ಲಿ ಅವಿಚ್ಛಿನ್ನವಾಗಿ ೪೦ ನಾಟಕಗಳು ನಡೆದು ವೆಚ್ಚಮಾಡಿದ್ದರಲ್ಲಿ ಅರ್ಧಕ್ಕಿಂತ ಹೆಚ್ಚಿನ ಹಣವು ಉತ್ಪನ್ನವಾಯಿತು.

“ಮುಂದೆ ನಾವು ಹೈದರಾಬಾದಿಗೆ ಹೋದಾಗ ಕುರುಕ್ಷೇತ್ರವನ್ನು ಆಂಧ್ರ ಭಾಷೆಗೆ ಪರಿವರ್ತನ ಮಾಡಿಸಿ, ಆಂಧ್ರ ದೇಶದಲ್ಲಿ ಸಂಚಾರ ಮಾಡಲು ನಿರ್ಧರಿಸಿದೆವು. ಕುರುಕ್ಷೇತ್ರದ ಆಂಧ್ರಾಭಿನಯವು ಹೈದರಾಬಾದಿನಲ್ಲೇ ಪ್ರಾರಂಭವಾಯಿತು. ಅಲ್ಲಿಂದ ನಾವು ಓರಂಗಲ್, ಬೆಜವಾಡ, ಕೋಕಿನಾಡ, ವಿಜಯನಗರಂ, ನೆಲ್ಲೂರು ಮುಂತಾದ ಆಂಧ್ರ ಪ್ರಾಂತದ ಪ್ರಮುಖ ನಗರಗಳಲ್ಲಿ ಸಂಚಾರ ಮಾಡಿದೆವು. ಎಲ್ಲಾ ಕಡೆಗಳಲ್ಲಿಯೂ ಸಂಸ್ಥೆಗೆ ಅಭೂತಪೂರ್ವವಾದ ಪ್ರೋತ್ಸಾಹವು ದೊರೆಯಿತು. ಪಂಡಿತರು ಪಾಮರರು ಬಂದು ನೋಡಿ ಆನಂದಿಸಿದರು. ಅನೇಕ ಕಡೆಗಳಲ್ಲಿ ನಾವು ಕುರುಕ್ಷೇತ್ರವನ್ನು ಅಭಿನಯಿಸಿದಾಗ ಸಿನಿಮಾ ಮಂದಿರಗಳನ್ನು ಮುಚ್ಚುವ ಪರಿಸ್ಥಿತಿಯುಂಟಾಗುತ್ತಿತ್ತು. ‘ಗುಬ್ಬಿ ಕಂಪೆನಿಯವರ ಕುರುಕ್ಷೇತ್ರ. ಸಿನಿಮಾಕ್ಕೆ ಯಾರೂ ಬರುವುದಿಲ್ಲ. ಒಳ್ಳೆ ಚಿತ್ರಗಳನ್ನು ಕಳುಹಿಸಬೇಡಿ’ ಎಂದು ಥಿಯೇಟರುಗಳವರು ಕಂಪನಿಗಳಿಗೆ ಬರೆಯುತ್ತಿದ್ದರು.

ಆಳಿದ ಮಹಾಸ್ವಾಮಿಯವರು 'ಕುರುಕ್ಷೇತ್ರ' ನಾಟಕವನ್ನು ಆದರದಿಂದ ನೋಡಿ ವೀರಣ್ಣನವರಿಗೆ ಆನೆ, ಕುದುರೆ, ಖಿಲ್ಲತ್ತುಗಳನ್ನು ದಯೆಪಾಲಿಸಿದರು. ಕುರುಕ್ಷೇತ್ರ ನಾಟಕದಲ್ಲಿ ಸಜೀವ ಆನೆ, ಕುದುರೆಗಳೇ ರಂಗಭೂಮಿಯ ಮೇಲೆ ಬಂದವು. ಕುರುಕ್ಷೇತ್ರ ನಾಟಕವನ್ನು ವಿಮರ್ಶಿಸುತ್ತಾ ನಾನು ಈ ಅಭಿಪ್ರಾಯವನ್ನು ವ್ಯಕ್ತಮಾಡಿದೆ.

"ಮಹಾಭಾರತ ವಿಶ್ವಕೋಶ

ಮಹಾಭಾರತವನ್ನು ಕೇವಲ ಒಂದು ಕಾವ್ಯವೆಂದು ಭಾವಿಸುವುದಕ್ಕಿಂತ ಕಾವ್ಯ, ಕಲೆ, ರಾಜ್ಯಶಾಸನಶಾಸ್ತ್ರ, ವೇದಾಂತಗಳ ವಿಶ್ವಕೋಶವೆಂದು ಭಾವಿಸುವುದೇ ಸರಿಯಾಗಿ ಕಾಣಿಸುತ್ತದೆ. ಮಹಾಕವಿ ಕುಮಾರವ್ಯಾಸ

ಅರಸುಗಳಿಗಿದುವೀರ ದ್ವಿಜರಿಗೆ। ಪರಮವೇದದಸಾರ ಯೋಗೀ।
ಶ್ವರರ ತತ್ವವಿಚಾರ ಮಂತ್ರೀಜನಕೆ ಬುದ್ಧಿಗುಣ ॥
ವಿರಹಿಗಳ ಶೃಂಗಾರ ವಿದ್ಯಾ। ಪರಿಣತರ ಸುಪ್ರೌಢಿಕಾವ್ಯ ॥

ಎಂದು ಹೇಳಿರುವುದರಲ್ಲಿ ಅತಿಶಯೋಕ್ತಿ ಕಾಣಬರುವುದಿಲ್ಲ. ನಮ್ಮ ಸಂಸ್ಕೃತಿಯನ್ನು ಅರಿಯಲು, ಅಳೆಯಲು ಮಹಾಭಾರತವೊಂದು ಹೆಗ್ಗುರುತೆಂಬುದನ್ನು ತಿಳಿದರೆ ಕಾವ್ಯದ ಜೀವಜೀವಾಳವನ್ನು ಗ್ರಹಿಸಲು ಅನುಕೂಲವಾಗುತ್ತದೆ. ಹೊಸತೆಂಬುದರ ಅನಂತವಾಹಿನಿಯೇ ಮಹಾಭಾರತವೋ ಎಂದು ಅದರ ವಿಚಾರವಾಗಿ ಬರುವ ನವೀನ ಕೃತಿಗಳನ್ನು ನೋಡಿದಾಗಲೆಲ್ಲಾ ಅನಿಸೇ ಅನಿಸುತ್ತದೆ. ಅಂತಹ ಭಾವನೆಯನ್ನುಂಟುಮಾಡುವುದೇ ಉತ್ತಮ ಕೃತಿ. ಪ್ರಕೃತದಲ್ಲಿ ಕರ್ನಾಟಕ ರಂಗಭೂಮಿಯನ್ನು ವಿರಾಜಿಸಿರುವ ಶ್ರೀ ಪುಟ್ಟಸಾಮಯ್ಯನವರ ನಾಟಕವೂ ಅಂತಹ ಭಾವನೆಯನ್ನುಂಟುಮಾಡುವ ಉತ್ತಮ ಕಲಾಕೃತಿಯಾಗಿದೆ.

ಮಹಾಭಾರತದ ಆಣಿಕಲ್ಲೆಂದರೆ 'ಕುರುಕ್ಷೇತ್ರ'ಯುದ್ಧ. ಕುರುಕ್ಷೇತ್ರಯುದ್ಧವನ್ನು ಆಗುಮಾಡದೆ ಕಾವ್ಯವನ್ನು ಮುಗಿಸಲೆತ್ನಿಸಿದ್ದರೆ ನಾವು ವ್ಯಾಸಕವಿಯ ಕೃತಿಯಲ್ಲಿ ಕಾಣುತ್ತಿದ್ದುದು ಈಗಿನ ಚಿನ್ನದ ಗಣಿಯನ್ನಲ್ಲ, ಸಾಮಾನ್ಯವಾದ ಹುಲ್ಲು ಮೈದಾನವನ್ನು. ಕರ್ಣ, ಅಭಿಮನ್ಯು, ಅರ್ಜುನ,

ಭೀಷ್ಮ, ದ್ರೋಣ ಮೊದಲಾದ ಮಹಾವೀರರ ಚರಿತ್ರೆಗಳು ಸಂಪೂರ್ಣತೆಯನ್ನೂ ಸಾರ್ಥಕತೆಯನ್ನೂ ಕಂಡಿರುವುದು ಕುರುಕ್ಷೇತ್ರ ಯುದ್ಧ ಪ್ರಸಂಗದಲ್ಲಿಯೇ. ಪ್ರೇಮದ ಪ್ರಬಲವಾದ ವಿಲೋಭನೆ ಎದುರಿನಲ್ಲಿದ್ದರೂ ಕರ್ಣ, ಭೀಷ್ಮಾದಿಗಳು ಸ್ವಾಮಿನಿಷ್ಠೆಯ ಪ್ರಸ್ಥಾನವನ್ನು ಹೇಗೆ ಬಿಡದೆ ಅಪ್ಪಿ, ಅದು ತಮ್ಮ ವಧಾಸ್ಥಾನವಾಗುವುದನ್ನೂ ಗಮನಿಸದೆ 'ಆಚಂದ್ರಾರ್ಕವಾದ ಕೀರ್ತಿಯನ್ನು ಗಳಿಸಿದರು.' ಎಂಬುದರಲ್ಲಿಯೂ ತನ್ನ ಇಷ್ಟಮಿತ್ರರೆಲ್ಲರನ್ನೂ ನೀಗಿಕೊಂಡು ನಿರಾಶ್ರಿತನಾಗಿದ್ದರೂ 'ಅಭಿಮಾನಧನನ್ ಸುಯೋಧನನ್' ಎಂಬುದನ್ನು ಸಾರಿದ ದುರ್ಯೋಧನನ ಜೀವನದ ರುದ್ರನಾಟಕದಲ್ಲಿಯೂ ನಮಗೆ ಬೇಕಾದ ನಿಜವಾದ ಬಲತುಂಬಿದ ಕಾವ್ಯದ ತಿರುಳಿದೆ. ಪಂಪ, ರನ್ನ, ಗದುಗಿನ ನಾರಣಪ್ಪ ಮೊದಲಾದ ಕವಿಗಳು ಆ ಕಾವ್ಯಹೃದಯದ ಪರಿಚಯವನ್ನು ನಮಗೆ ಮಾಡಿಕೊಟ್ಟು ಅಭಿರುಚಿಯನ್ನು ಸುಧಾರಿಸಿದರು.

ಕುರುಕ್ಷೇತ್ರದ ಯುದ್ಧವನ್ನು ಧರ್ಮಾಧರ್ಮದ ಸಮರವೆಂದು ಸಾಂಕೇತಿಕವಾಗಿಯೇ ತೆಗೆದುಕೊಂಡರೂ, ಇಲ್ಲವೆ ಸೋದರರ ಸ್ವಯೂಥ ಕಲಹದ ಘೋರ ವಿಪತ್ತೆಂಬ ಅರ್ಥದಲ್ಲಿಯೇ ತೆಗೆದುಕೊಂಡರೂ ಅದು ಒಂದು ದೊಡ್ಡ ಆದರ್ಶವನ್ನು ನಮ್ಮ ಮುಂದಿಡುತ್ತದೆ. ಜೀವನದಲ್ಲಿ ಒಂದು ಪ್ರಬಲವಾದ ಸಮಸ್ಯೆಯೊದಗಿದಾಗ ಅದನ್ನು ಎದುರಿಸಿ ಗೆದ್ದು ಯಾವನು ಬರುವನೋ ಅವನೇ ವೀರ, ಅವನೇ ಪೂಜ್ಯ ಎಂಬ ಕಲ್ಪನೆಯನ್ನು ಗದಾಯುದ್ಧ ಪ್ರಸಂಗದಲ್ಲಿ ಮೂರ್ಛಿತನಾದ ಭೀಮಸೇನನನ್ನು ತನ್ನ ಗದೆಯ ಗಾಳಿ ಬೀಸಿ ಉಪಚರಿಸಿದ ದುರ್ಯೋಧನನನ್ನೂ ರಥದ ಗಾಲಿಗಳನ್ನು ಎತ್ತುತ್ತಿದ್ದ ಕರ್ಣನನ್ನು ಹೊಡೆದುಕೆಡವಿದ ಪಾರ್ಥನನ್ನೂ ಹೋಲಿಸಿನೋಡಿ. ಪಾರ್ಥನ ಗೆಲುವು ಗೆಲುವಲ್ಲ, ದುರ್ಯೋಧನನ ಸೋಲು ಸೋಲಲ್ಲ ಎಂಬ ನಿರ್ಣಯವನ್ನು ಕೊಡುವ ಚಾಪಲ್ಯವನ್ನು ರನ್ನ ಪಂಪರು ಹುಟ್ಟಿಸಿದ್ದಾರೆ.

## ಕಾವ್ಯದ ಯಥಾರ್ಥತೆ

ಶ್ರೀಮಾನ್ ಪುಟ್ಟಸ್ವಾಮಯ್ಯನವರು ನಮ್ಮ ಮುಂದೆ ಯಾವ ಹೊಸ ದೃಷ್ಟಿಯನ್ನು ಇಡಲು ಪ್ರಯತ್ನಿಸದಿದ್ದರೂ ಕಾವ್ಯದ ಯಥಾರ್ಥತೆಯನ್ನು ಚಿತ್ರಿಸಲು ತುಂಬ ಶ್ರಮಪಟ್ಟಿದ್ದಾರೆ. ಕಾವ್ಯದ ವಿಕೃತ ಸ್ವರೂಪವನ್ನು

'ಚರಂಡಿ ರಂಗಭೂಮಿ'ಯ ಮೇಲೆ ಕಾಣುತ್ತಿದ್ದ ನಮಗೆ ಈ ಸಹಜ ಚಿತ್ರ ನವೀನವಾಗಿಯೇ ಕಂಡು ಬರುವುದರಲ್ಲಿ ಆಶ್ಚರ್ಯವೇನು ? 'ಕುರುಕ್ಷೇತ್ರ' ನಾಟಕ ಪಾರ್ಥ ದುರ್ಯೋಧನರು ದ್ವಾರಕಿಯಲ್ಲಿ ಕೃಷ್ಣನ ಸಹಾಯ ಕೋರುವುದರಿಂದ ಆರಂಭವಾಗಿ ಧರ್ಮರಾಜ್ಯಸ್ಥಾಪನೆಯಲ್ಲಿ ಕೊನೆಗಾಣುತ್ತದೆ. ಈ ಮಧ್ಯೆ ಕೃಷ್ಣ ಸಂಧಾನ, ಕುಂತೀ ಕರ್ಣ ವೃತ್ತಾಂತ, ಗೀತಾ ಬೋಧೆ, ಭೀಷ್ಮ ಪರಾಜಯ, ಅಭಿಮನ್ಯುವಿನ ವಧೆ, ಸೈಂಧವ ದುಶ್ಯಾಸನ ಕರ್ಣ ಇವರ ಮೃತ್ಯು, ಗದಾಯುದ್ಧ ಮೊದಲಾದ ವೃತ್ತಾಂತಗಳು ವಿಶದವಾಗಿ ಚಿತ್ರಿತವಾಗಿವೆ. ವಸ್ತುವಿನ ವಿಸ್ತೃತೆಯು ರಸ ಪೋಷಣೆಗೆ ಕೆಲವು ಕಡೆ ಇಂಬು ಕೊಡದಿದ್ದರೂ ಕಥಾ ಬೆಳವಳಿಗೆಯ ದೃಷ್ಟಿಯಲ್ಲಿ ಪ್ರೇಕ್ಷಕರಿಗೆ ಅದು ಒಂದು ಕುಂದಾಗಿ ಕಾಣಬರುವುದಿಲ್ಲ. ಆಡುವ ಕುರುಕ್ಷೇತ್ರ ನಾಟಕದಲ್ಲಿ ಕೃಷ್ಣ, ಶಕುನಿ, ಭೀಮ ಇವರುಗಳಿಗೆ ಪ್ರಾಶಸ್ತ್ಯ ಹೆಚ್ಚು. ಶಕುನಿಯ ಕೈಯಲ್ಲಿ ಸಿಕ್ಕಿದ ದುರ್ಯೋಧನ ಕೇವಲ ಒಂದು ಗೊಂಬೆಯಾಗಿದ್ದಾನೆ. ಈ ನಾಟಕದಲ್ಲಿ ನಾವು ಕಾಣುವುದು ಅಭಿಮಾನಧನನಾದ, ಅಜೇಯನಾದ, ಅಚಲ ನಿರ್ಧಾರಕ್ಕೆ ತಾಳಿ ಕಟ್ಟಿದ ವೀರ ಕೌರವನನ್ನಲ್ಲ; ಕೇವಲ ಒಬ್ಬ ಸಹಾಯಶೂನ್ಯ ವಿನೋದಪ್ರಿಯ ಪ್ರಹಸನಗಾರನನ್ನು. ಈ ಅಭಿಪ್ರಾಯವನ್ನು ಹುಟ್ಟಿಸುವುದು ಕೌರವ ಪಾತ್ರಾಭಿನಯಗಾರರ ಅಸಂಸ್ಕೃತ ಅಭಿನಯವೆಂಬುದನ್ನು ನಾನು ಮರೆಯಲಾರೆನಾದರೂ ದುರ್ಯೋಧನನಿಗೆ ಕುರುಕ್ಷೇತ್ರ ನಾಟಕಕರ್ತರು ಸರಿಯಾದ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾರೆಂದೂ ಒಪ್ಪಲಾರೆ. ಶ್ರೀ ಕೃಷ್ಣನ ಪಾತ್ರಸೃಷ್ಟಿಯಲ್ಲಿಯೂ, ಅಭಿಮನ್ಯು ಸುಭದ್ರಾ, ಉತ್ತರೆಯರ ಚಿತ್ರಚರಿತ್ರೆಗಳಲ್ಲಿಯೂ ಶ್ರೀಯುತರು ಅಸಾಧಾರಣ ಕೌಶಲ್ಯವನ್ನು ತೋರಿಸಿದ್ದಾರೆ. ಗೀತಾಬೋಧೆಯ ದೃಶ್ಯ, ಅಭಿಮನ್ಯುವಿನ ಸರಳ ಪ್ರಣಯ ಪ್ರಸಂಗಗಳಂತೂ ಉತ್ತಮ ಕಲಾ ಸೃಷ್ಟಿಗಳು.

## ಒಂದು ಉದಾಹರಣೆ

ಇದುವರೆಗೆ ನಾಟಕೋಪಜೀವಿಗಳ ರಂಗಭೂಮಿಯನ್ನು ಮೆಟ್ಟುತ್ತಿದ್ದ ನಾಟಕಗಳ ಸಾಹಿತ್ಯಕ್ಕೂ ಇದಕ್ಕೂ ಬಹಳ ವ್ಯತ್ಯಾಸವಿದೆ.

ಶ್ರೀಯುತರ ಭಾಷೆಯಲ್ಲಿರುವ ಕಾವ್ಯ ಮಾಧುರ್ಯ, ತೇಜಃಪುಂಜತೆ, ಗಾಂಭೀರ್ಯ, ಶಕ್ತಿ ಮುಂದೆ ನಾಟಕೋಪಜೀವಿಗಳಿಗೆ, ನಾಟಕಬರೆದು ಕೊಡುವವರಿಗೆ ಮೇಲ್ಪಂಙ್ತ್ತಿಯಾಗಲರ್ಹವಾಗಿದೆಯೆಂದು ಧಾರಾಳವಾಗಿ ಹೇಳ ಬಹುದು. ಮಹಾಭಾರತದ ಯೋಗ್ಯತೆಗೆ ತಕ್ಕ ಶೈಲಿಯಿಂದ ಉತ್ತಮ ನಾಟಕ ವನ್ನು ಸೃಷ್ಟಿಸಬೇಕೆಂಬ ಹಂಬಲ ಹೆಜ್ಜೆಹೆಜ್ಜೆಗೂ ಕಾಣಬರುತ್ತದೆ. ಕೀಳು ಅಭಿರುಚಿಗೆ ಸೊಪ್ಪುಹಾಕುವುದೇ ತಮ್ಮ ಕರ್ತವ್ಯವೆಂದು ಬಗೆದು, ಆ ಅಭಿ ರುಚಿಗೆ ತಕ್ಕಂತೆ ಬರೆಯುವವರಿಗೂ, 'ನಾಲ್ಕಾಣೆ'ಯ ಜನತೆಯನ್ನು ತಮ್ಮ ಹಂತಕ್ಕೆ ಎತ್ತಲು ಯತ್ನಿಸದೆ ಅವರಿಗೆ ತಕ್ಕ ನಾಟಕಗಳನ್ನು ಬರೆಯಬೇಕು ಎಂದು ವಾದಿಸುವವರಿಗೂ ಈ ನಾಟಕ ತಕ್ಕ ಉತ್ತರ. ಕುಶಲನಾದ ಕವಿ ತನ್ನ ಪ್ರತಿಭೆಯಿಂದ ಸಾಮಾನ್ಯರಲ್ಲಿಯೂ ಸುಪ್ತವಾಗಿರುವ ಕಲಾ ಚೇತನಗಳನ್ನು ಹೇಗೆ ಜಾಗೃತಗೊಳಿಸಬಲ್ಲನೆಂಬುದಕ್ಕೆ ಶ್ರೀಯುತರ 'ಕುರುಕ್ಷೇತ್ರ'ವೇ ತಕ್ಕ ಸಾಕ್ಷಿ.

## ಪ್ರದರ್ಶನ ವೈಭವ

ನಾಟಕಕ್ಕೆ ತಕ್ಕ ಪ್ರದರ್ಶನ ಲಭಿಸಿದರೇನೇ ಅದರ ಕಲೆ ಸಾರ್ಥಕವಾಗುವುದು. ಅಂತಹ ಪ್ರಯತ್ನ ಇದರಲ್ಲಿ ನಡೆದಿದೆ ಎಂದು ಸಂತೋಷವಾಗಿ ಹೇಳಬಹುದು. ಶ್ರೀಮಾನ್ ವೀರಣ್ಣನವರು ವಿಶೇಷ ಹಣ ವನ್ನು ವೆಚ್ಚಮಾಡಿ ಹೊಸ ಹೊಸ ದೃಶ್ಯಗಳನ್ನು ಅಳವಡಿಸಿದ್ದಾರೆ. ಅವು ಗಳಲ್ಲಿ ಕೃಷ್ಣನ ಶಯ್ಯಾಗೃಹ, ಗೀತಾಬೋಧೆಯ ದೃಶ್ಯಗಳೆರಡೂ ಶ್ಲಾಘ್ಯ ವಾಗಿವೆ. ಭೀಷ್ಮನ ಶರತಲ್ಪ, ಸೂರ್ಯಾಸ್ತ ದೃಶ್ಯಗಳನ್ನು ಹಿಂದೆ ಇತರ ಸಂಘಗಳಲ್ಲಿ ಕಂಡಿದ್ದೆವು. ಕೊನೆಯಲ್ಲಿ ಧರ್ಮರಾಯನ ದರ್ಬಾರಿನ ದೃಶ್ಯ ಮನೋಹರವಾಗಿದ್ದಿತು. ಮಿತವಿಲ್ಲದ ದೃಶ್ಯನಿಯೋಜನೆ, ಹಲವು ತೆರೆಗಳ ಅನಂತವರ್ಣ ಪ್ರದರ್ಶನಗಳಲ್ಲಿ ನಟರಾಗಲೀ, ನಾಟಕವಾಗಲೀ ಕಣ್ಣಿಗೂ ಬೀಳುವುದಿಲ್ಲ. ಉತ್ತಮ ಹಿನ್ನೆಲೆಯ ಮುಂದೆ ಆಡಿದ 'ಗೊಂಬೆಯಾಟ'ವಾಗಿತ್ತು ಕುರುಕ್ಷೇತ್ರವೆಂದರೆ ತಪ್ಪಾಗದು. ದೃಶ್ಯ ನಿಯೋಜನೆ. ನಾಟಕವನ್ನೂ ನಟರನ್ನೂ ಅನುವರ್ತಿಸಬೇಕು, ಅವರಿಗೆ ಅಧೀನವಾಗಿರಬೇಕು, ಅವರ ಕೃತಿಗಳನ್ನು ಎತ್ತಿ ತೋರಿಸುವ ಸಾಧನ

ದಂತಿರಬೇಕು. ಇಲ್ಲಿ ಅವುಗಳದೇ ಪ್ರಾಬಲ್ಯ ಕಾಣಬರುತ್ತದೆ. ಆದಷ್ಟು ಮಟ್ಟಿಗೆ ದೃಶ್ಯಗಳನ್ನು ಕತ್ತಲೆ ಬೆಳಕುಗಳ ಸಹಾಯದಿಂದ ನಿರ್ವಹಿಸುವುದರಿಂದ ವಸ್ತುಗಳ ಭಾವಸಿದ್ಧಿ ಸಾಧಿಸುತ್ತದೆ. ಉದಾಹರಣೆಗಾಗಿ ಗೀತಾಬೋಧೆಯ ದೃಶ್ಯವನ್ನು ನೆರಳನಾಟದಂತೆ ಆರಂಭಿಸಬಹುದು. ರಥ ಕುದುರೆಗಳ ಹಿಂದೆ ದೊಡ್ಡದಾಗಿ ಅವುಗಳ ಆಕೃತಿ ನೆರಳಿನಲ್ಲಿ ಕಂಡುಬಂದ ಕೆಲವು ಕ್ಷಣಗಳ ಮೇಲೆ ಕೃಷ್ಣಾರ್ಜುನರ ಸಂಭಾಷಣೆ ಆರಂಭವಾದರೆ ಪ್ರೇಕ್ಷಕರ ಮನಸ್ಸಿನಲ್ಲಿ ಗಂಭೀರ ಭಾವನೆ ಮೂಡಲು ಸಹಾಯವಾಗುತ್ತದೆ.

### ವೇಷಭೂಷಣಗಳ ಅಸಂಬದ್ಧತೆ

ನಟರ ವೇಷಭೂಷಣಗಳು ಯಾವ ನಿಯಮವನ್ನೂ ಅನುಸರಿಸಿದಂತಿರಲಿಲ್ಲ. ಪೌರಾಣಿಕ ನಾಟಕಗಳಲ್ಲಿ ಈ ಬಗ್ಗೆ ಒಂದು ಕ್ರಾಂತಿಯೇ ಆಗಬೇಕು. ಅಜಂತಾ, ಎಲ್ಲೋರಾ, ಬಾಗ್ ಮೊದಲಾದ ಸ್ಥಳಗಳಲ್ಲಿರುವ ಗುಹಾಂತರ್ದೇವಾಲಯಗಳಲ್ಲಿರುವ ಚಿತ್ರಗಳ ವೇಷ ಭೂಷಣಗಳನ್ನು ಅನುಸರಿಸಬಹುದು. ಇದು ಕಾವ್ಯವಸ್ತುಗಳಿಗೆ ಒಂದು ಬಗೆಯ ಪ್ರಾಚೀನ ವಾತಾವರಣವನ್ನು ಕಲ್ಪಿಸಿಕೊಡುತ್ತದೆ. ಈ ಮಂಡಳಿಯವರು ಸ್ವಲ್ಪ ಅಭಿರುಚಿಯನ್ನು ವ್ಯಕ್ತಪಡಿಸಿ ಕೃಷ್ಣ, ಅರ್ಜುನ, ಕರ್ಣ, ಸುಭದ್ರೆಯರನ್ನಲಂಕರಿಸಿದ್ದರು. ಆದರೆ ಒಟ್ಟಿನಲ್ಲಿ ಯಾವ ವ್ಯವಸ್ಥೆಯೂ ಕಾಣಬರುತ್ತಿರಲಿಲ್ಲ. ಸೈಂಧವನ ವೇಷ ಗ್ರೀಕ್ ವೀರನಂತೆ, ಶಕುನಿಯ ವೇಷ ರಜಪೂತ ಸರದಾರನಂತೆ, ದುರ್ಯೋಧನನ ವೇಷ ಮುಸಲ್ಮಾನ ನವಾಬನಂತೆ, ಭೀಮನ ವೇಷ ಭೂತೋಚ್ಚಾಟನ ಮಾಡುವ ಗಾರುಡಿಗನಂತೆ ಇದ್ದುದು ರಸಪೋಷಣೆಗೆ ಸಹಕಾರಿಯಾಗಿರಲಿಲ್ಲ. ಶ್ರೀಮಾನ್ ವೀರಣ್ಣನವರಂತಹ ಸಾಹಸಿಗರು ಈ ವಿಚಾರದಲ್ಲಿ ತಿಳಿದವರ ಸಲಹೆಯನ್ನು ತೆಗೆದುಕೊಂಡು ವೇಷಭೂಷಣಗಳನ್ನು ಅಳವಡಿಸುವುದುತ್ತಮ.

### ಪಾತ್ರಕ್ಕೆ ನಟನಾಗಬೇಕು

ನಾಟಕಕ್ಕೆ ಕಾವ್ಯವೆಷ್ಟು ಮುಖ್ಯವೋ ನಟರೂ ಅಷ್ಟೇ ಮುಖ್ಯ. ಅನೇಕ ಸಲ ಉತ್ತಮ ನಟವರ್ಗ ಕವಿಯ ದೋಷಗಳನ್ನು ಮುಚ್ಚಿ ಕಾವ್ಯ ರಂಗದಲ್ಲಿ ಯಶಸ್ವಿಯಾಗುವಂತೆ ಮಾಡುತ್ತದೆ. ಈ ನಾಟಕದ

ನಟಬಳಗ ತೀರಾ ಅಸಮರ್ಪಕವಾಗಿದ್ದಿತೆಂದು ವಿಷಾದದಿಂದ ಹೇಳ ಬೇಕಾಗಿದೆ. ಭೀಮ ದುರ್ಯೋಧನ, ದ್ರೌಪದಿ ಇವರುಗಳನ್ನು ಬದಲಾಯಿ ಸಲೇ ಬೇಕು. ಭೀಮನ ಪಾತ್ರಕ್ಕೆ ಈ ನಟರು ದೊಡ್ಡ ಅಪವಾದ. 'ಮಿತಿ' ಯೆಂಬ ವಸ್ತುವೊಂದಿದೆಯೆಂಬುದನ್ನು ಕಲಾಪ್ರೇಮಿ ಅರಿ ಯುವವರೆಗೆ ಅವನಿಗೆ ರಂಗದಮೇಲೆ ಎಡೆಯಿಲ್ಲ. ಭೀಮನ ಪಾತ್ರಾಭಿನಯ ಗಾರರು ಇನ್ನೂ 'ಬಯಲಾಟ-ಭಾಗವತರಾಟ'ದ ದರ್ಜೆಯಲ್ಲಿಯೇ ಇದ್ದಾರೆ. ದುರ್ಯೋಧನನ ಪಾತ್ರಾಭಿನಯಗಾರರು ಹಾಸ್ಯಾಭಿನಯ ಗಾರರು ಮತ್ತು ಸಂಘದ ಒಡೆಯರು. ಪಾತ್ರಕ್ಕೆ ತಕ್ಕ ಗಾಂಭೀರ್ಯ, ಮಾತುಗಾರಿಕೆ, ರೂಪ, ಒಂದೂ ಇವರಲ್ಲಿ ಇಲ್ಲ. ನಟರು ತಮ್ಮ ಯೋಗ್ಯತೆಯ ಮಿತಿಯನ್ನರಿತು ಅದಕ್ಕನುಗುಣವಾದ ಪಾತ್ರವನ್ನೇ ವಹಿಸ ಬೇಕು. ದ್ರೌಪದಿ ಪಾತ್ರಾಭಿನಯ ಮಾಡಿದವರು ಮೊದಲು 'ಬಾಲ ಬೋಧೆ'ಯ ಅಭ್ಯಾಸಕ್ಕೆ ಆರಂಭಿಸಬೇಕು. ಇವರ ಬಾಯಲ್ಲಿ ಮಾತುಗಳು ಮುರಿದು ಮುರಿದು ಬೀಳುತ್ತವೆ. ಅಲ್ಲದೆ ತಾನು ನಿಂತಿರುವುದು ರಂಗದ ಮೇಲೆ ಸಾವಿರಾರು ಪ್ರೇಕ್ಷಕರ ಎದುರಿನಲ್ಲಿ ಎಂಬುದನ್ನು ಮರೆತು ಸಹ ನಟ ರೊಂದಿಗೆ 'ದ್ರೌಪದಿ' ಕುಚೇಷ್ಟೆಗೆ ಆರಂಭಿಸಿಬಿಡುತ್ತಾಳೆ. ಕೃಷ್ಣನ ಪಾತ್ರಾಭಿನಯಗಾರರಿಗೆ ರೂಪಸಂಪತ್ತಿಲ್ಲದಿದ್ದರೂ, ಅರ್ಜುನನ ಪಾತ್ರಾಭಿನಯಗಾರರಿಗೆ ವೀರರಸೋತ್ಪಾದನೆಯ ಶಕ್ತಿಯಿಲ್ಲದಿದ್ದರೂ ಇಬ್ಬರೂ ಉತ್ತಮ ನಟರು, ಉತ್ತಮ ಗಾಯಕರು. ಶುದ್ಧವಾದ ಉಚ್ಚಾ ರಣೆ, ಗಂಭೀರವಾದ ಅಭಿನಯ, ಪಾತ್ರದಲ್ಲಿ ತಲ್ಲೀನತೆಗಳಿಂದ ಇವರು ಪ್ರೇಕ್ಷಕರ ಅಭಿಮಾನಕ್ಕೆ ಅರ್ಹರು. ಕರ್ಣ, ಶಕುನಿ, ಸುಭದ್ರಾ ಪಾತ್ರಗಳ ನ್ನಭಿನಯಿಸಿದ ಮೂವರೂ ರಂಗದ ಕಲೆಯಲ್ಲಿ ನುರಿತವರು, ಅದರ ರಹಸ್ಯವನ್ನು ಅರಿತವರು. ಅಭಿಮನ್ಯುವಿಗೆ 'ಹುಮ್ಮಸು' ಹೆಚ್ಚು. ಉತ್ತರೆಯ ಗಾಂಭೀರ್ಯ ಅಭಿಮನ್ಯುವಿಗೆ ಸ್ವಲ್ಪ, ಅಭಿಮನ್ಯುವಿನ ವಿದ್ಯು ಶ್ಶಕ್ತಿ ಉತ್ತರೆಗೆ ಸ್ವಲ್ಪ ಬಂದರೆ ಇಬ್ಬರೂ ಉತ್ತಮ ನಟರಾಗುತ್ತಾರೆ. ಈ ನಾಟಕದಲ್ಲಿ ಬರುವ ಸೇನಾನಿ-ಅವನ ಹೆಂಡತಿಯ ಹಾಸ್ಯ ಕೇವಲ ಅನ ವಶ್ಯಕ, ಅಲ್ಲದೆ ಶುದ್ಧ ಕೀಳುದರ್ಜೆಗೆ ಸೇರಿದುದು. ಸೇನಾನಿ ಮಾಡಿದ ನಟನಿಗೆ ಅಂಕೆ ಆತಂಕಗಳೊಂದೂ ಇದ್ದಹಾಗೆ ಕಾಣಬರಲಿಲ್ಲ.

ಹಾರೈಕೆ

ಒಟ್ಟಿನಲ್ಲಿ ನಾಟಕವು ಉತ್ತಮವಾಗಿದೆಯೆನ್ನಬಹುದು. ಈ ದೋಷಗಳ ಸುಧಾರಣೆಗೆ ಸಂಘದ ಒಡೆಯರು ಮನಸ್ಸುತೆತ್ತರೆ 'ಕುರುಕ್ಷೇತ್ರ' ಕನ್ನಡ ರಂಗಭೂಮಿ ಹೆಮ್ಮೆ ಪಡುವ ಒಂದು ನಾಟಕವಾಗಬಹುದು. ಈಗಿರುವ ಆರು ಘಂಟೆ ನಾಟಕವನ್ನು ೩-೪ ಘಂಟೆಗಿಳಿಸುವುದು ಉತ್ತಮ. ನಟರ ಆರೋಗ್ಯ, ಪ್ರೇಕ್ಷಕರ ತಾಳ್ಮೆ ಎರಡು ಕಡೆಗೂ ಪ್ರದರ್ಶನಗಾರರು ಗಮನಕೊಡಬೇಕು.

ಕನ್ನಡ ಕಲಾಭಿಮಾನಿಗಳು ಈ ನಾಟಕವನ್ನು ನೋಡಬೇಕು. ಇದರಲ್ಲಿರುವ ವೈಭವ, ಉತ್ತಮ ಸಾಹಿತ್ಯ ಎರಡು ದೃಷ್ಟಿಯಿಂದಲೂ ನೋಡಬೇಕು. ಮತ್ತು ಉತ್ತಮ ಸಾಹಿತ್ಯ ನಾಟಕಕ್ಕೆ ಈ ಬಗೆಯ ಅಪೂರ್ವ ಮನ್ನಣೆಯನ್ನು ತೋರಿಸುವ ಶ್ರೀಮಾನ್ ವೀರಣ್ಣನವರು ಮುಂದೆಯಾದರೂ ಇದೇ ಮೇಲ್ಪಂಙ್ತಯನ್ನನುಸರಿಸುವಂತೆ ಪ್ರೇರೇಪಿಸಬೇಕು.*"

ಆಂಧ್ರ ದಿಗ್ವಿಜಯ ಮಾಡಿಬರುತ್ತಾ ವೀರಣ್ಣನವರು ಜತೆಯಲ್ಲಿ 'ಕರ್ನಾಟಕಾಂಧ್ರ ನಾಟಕಸಾರ್ವಭೌಮ' ಪ್ರಶಸ್ತಿಯನ್ನು ರಾಜಮಹೇಂದ್ರಿಯಲ್ಲಿ ಪಡೆದು ಬಂದರು.

ಕನ್ನಡ ನಾಟಕರಂಗಕ್ಕೆ ವೀರಣ್ಣನವರ ಸೇವೆ ಎಷ್ಟು ಅಧಿಕವೊ ಅಷ್ಟೇ ಅಧಿಕವಾಗಿದೆ ಚಲನಚಿತ್ರರಂಗಕ್ಕೆ ಅವರು ಮಾಡಿರುವ ಉಪಕಾರ. 'ಕಬೀರದಾಸ', 'ಅವನ ಪ್ರಣಯ' ಚಿತ್ರಗಳನ್ನು ನಿಶ್ಶಬ್ದ ಚಿತ್ರಗಳ ಕಾಲದಲ್ಲಿ ಸಿದ್ಧಗೊಳಿಸಿದರು. ಆಗಲೇ ಒಂದು ಸ್ಟುಡಿಯೋ ನಿರ್ಮಾಣದಲ್ಲಿ ತೊಡಗಿ ಸಾವಿರಾರು ರೂಪಾಯಿಗಳನ್ನು ಕಳೆದುಕೊಂಡರು. ಚಲನಚಿತ್ರ ರಂಗದಲ್ಲಿ ಆರಂಭದಲ್ಲಿಯೇ ಆದ ಕಟು ಅನುಭವದಿಂದ ವೀರಣ್ಣನವರು ಎದೆಗುಂದಲಿಲ್ಲ. ಕಷ್ಟನಷ್ಟಗಳು ಅವರ ಉತ್ಸಾಹವನ್ನು ಇಮ್ಮಡಿಸಿದವು. ೧೯೪೦ರಲ್ಲಿ 'ಸುಭದ್ರಾ'—೧೯೪೨ರಲ್ಲಿ 'ಜೀವನ ನಾಟಕ'—೧೯೪೫ರಲ್ಲಿ 'ಮಲ್ಲಮ್ಮ' ಚಿತ್ರಗಳನ್ನು ಹೊರಡಿಸಿ ಕರ್ನಾಟಕದಲ್ಲಿ ಚಲನಚಿತ್ರ ಉದ್ಯಮ ತಲೆಯೆತ್ತಲು ನೆರವಾದರು. ನೂರಾರು ಕನ್ನಡ ಕಲಾವಿದರಿಗೆ ಪ್ರತಿಭೆಯ ಪ್ರಕಾಶನಕ್ಕೆ ಅವಕಾಶ ದೊರೆಯಿತು.

---

*ವಿಶ್ವಕರ್ನಾಟಕ ೨೧-೧-೩೫

ಈಯೆಲ್ಲ ಸೇವೆಯನ್ನು ಗೌರವಿಸಿ ಆಳುವ ಮಹಾಸ್ವಾಮಿಯವರು ೧೯೪೨ರಲ್ಲಿ ವೀರಣ್ಣನವರಿಗೆ 'ನಾಟಕರತ್ನ' ಎಂಬ ಬಿರುದನ್ನು ಉಚಿತ ಸನ್ಮಾನದೊಂದಿಗೆ ದಯೆಪಾಲಿಸಿದರು. ವೀರಣ್ಣನವರು ಅರಮನೆ, ಗುರುಮನೆ, ಜನಮನೆಗಳಿಂದ ಗೌರವಿತರಾದರು.

ಗೌರವ, ಕೀರ್ತಿ, ಧನ ವೀರಣ್ಣನವರ ಪಾಲಿಗೆ ಯಥೇಚ್ಛವಾಗಿ ದೊರೆತಿದೆ. ಅವರಿಗೆ ಲಭಿಸಿರುವ ಯಶಸ್ಸಿನಲ್ಲಿ ಒಂದಂಶ ಇತರರಿಗೆ ದೊರೆತರೂ ಅವರನ್ನು ಹಿಡಿಯುವುದು ಕಷ್ಟ. ಆದರೆ ಇಂದಿಗೂ ನಾಟಕರತ್ನರು—ನಾಲ್ಕಾರು ನಾಟಕಶಾಲೆಗಳ ಮಾಲೀಕರು—ಶ್ರೀಮಂತರು ಆದ ವೀರಣ್ಣನವರು ಎಂದಿನಂತೆ ಇದ್ದಾರೆ. ಅದೇ ಸರಳತನ, ಅದೇ ನಿರಹಂಕಾರ, ಅದೇ ವಿದ್ವತ್ಪ್ರೇಮ.

ವೀರಣ್ಣನವರು ಕೈತುಂಬ ಗಳಿಸಿದರು. ಕೈತುಂಬ ಬಳಸಿದರು. ಅವರ ದಾನಧರ್ಮಕ್ಕೆ ಮಿಗಿಲಿಲ್ಲ, ಅಳತೆಯಿಲ್ಲ. ಅವರ ಉಪಕಾರಕ್ಕೆ ಋಣಿಯಾಗದ ಸಂಸ್ಥೆಯಿಲ್ಲ. ಅದೊಂದು ಬಡವರ ಕಾಮಧೇನು—ಕಲಾವಿದರ ಕಲ್ಪವೃಕ್ಷ. ದೇಹೀ ಎಂದವರಿಗೆ ನಾಸ್ತಿ ಎನ್ನುವುದು ವೀರಣ್ಣನವರ ಜಾಯಮಾನದಲ್ಲಿಲ್ಲ. ಇವರ ದಾನಧರ್ಮದ ಅಂಕೆ ಸಂಖ್ಯೆಯನ್ನು ಎಣಿಸಿದರೆ ಕೆಲವು ಲಕ್ಷಗಳಾಗಬಹುದು.

ವೀರಣ್ಣನವರ ಉದಾತ್ತ ಹೃದಯಕ್ಕೆ ಒಂದು ನಿದರ್ಶನ ಸಾಕು. 'ಜೀವನ ನಾಟಕ' ಪ್ರದರ್ಶನಕ್ಕೆ ಸಿದ್ಧವಾಗುತ್ತಿದ್ದ ಕಾಲ. ಸುಮಾರು ಒಂದು ವರ್ಷ ವೀರಣ್ಣನವರ ಜತೆ ದುಡಿದ ಅನುಭವ ನನಗಿದೆ. ಆಗ ಬಾಲಗಂಧರ್ವರ ಕಂಪೆನಿ ಬೆಂಗಳೂರಿಗೆ ಬಂದಿತ್ತು. ವೀರಣ್ಣನವರ ಶಿವಾನಂದ ನಾಟಕ ಶಾಲೆಯಲ್ಲಿ ನಾಟಕಗಳಾದವು. ಬಾಲಗಂಧರ್ವರ ದುರದೃಷ್ಟದಿಂದ ಏನೂ ಹಣ ಸಿಗಲಿಲ್ಲ. ಪ್ರತಿದಿನದ ನಾಟಕಕ್ಕೆ ೨೦—೨೫ರೂ ಕಾಣುವುದು ಕಷ್ಟವಾಗಿತ್ತು. ನಾಟಕ ಶಾಲೆಯ ಬಾಡಿಗೆ ಕೆಲವು ಸಾವಿರಗಳ ವರೆಗೆ ಏರಿತ್ತು. ಗಂಧರ್ವರ ಕಂಪೆನಿ ಬೆಂಗಳೂರು ಬಿಡಲು ನಿಶ್ಚಯಿಸಿದರು. ನಾಟಕ ಶಾಲೆಯ ವ್ಯವಸ್ಥಾಪಕರು ಬಾಡಿಗೆ ಹಣ ಕೊಟ್ಟ ಹೊರತೂ ಸಾಮಾನುಗಳನ್ನು ಸಾಗಿಸುವುದಕ್ಕೆ ಅವಕಾಶ ಕೊಡುವುದಿಲ್ಲವೆಂದರು.



ನಾಟಕರತ್ನ ವೀರಣ್ಣ

[ಪುಟ ೧೨

ಒಂದು ದಿನ ನಾವೆಲ್ಲ ವೀರಣ್ಣನವರ ಕಛೇರಿಯಲ್ಲಿ ಮಾತನಾಡುತ್ತ ಕುಳಿತಿದ್ದಂತೆ ಗಂಧರ್ವ ಬಂದರು. ವೀರಣ್ಣನವರು ಅತ್ಯಂತ ಗೌರವಾದರಗಳಿಂದ ಅವರನ್ನು ಬರಮಾಡಿಕೊಂಡು ಅವರ ಕರುಣ ಕಥೆಯನ್ನು ಕೇಳಿದರು. 'ದಯಿಯಿಟ್ಟು ಸಾಮಾನು ಕೊಡಿಸಿದರೆ ಮುಂದಿನ ಕ್ಯಾಂಪಿನಲ್ಲಿ ನಾಟಕ ಮಾಡಿ ಹಣ ಕಳುಹಿಸುತ್ತೇವೆ' ಎಂದರು ಗಂಧರ್ವ. ವೀರಣ್ಣನವರ ಕಣ್ಣುಗಳು ತೇವಗೊಂಡಿದ್ದವು. ಗಂಧರ್ವರ ಕೈ ಹಿಡಿದು 'ನೀವು ಏನೂ ಕೊಡಬೇಡಿ—ಸಾಮಾನುಗಳನ್ನು ಅವಶ್ಯಕ ತೆಗೆದುಕೊಂಡು ಹೋಗಿ. ನಾಟಕ ಕಲೆಗೆ ನೀವು ಮಾಡಿರುವ ಸೇವೆಗೆ ನಾನು ಇಷ್ಟಾದರೂ ಗೌರವ ತೋರಿಸಬೇಡವೇ' ಎಂದರು. ಗಂಧರ್ವರು ಹೊರಟು ಹೋದ ಮೇಲೆ ನಮ್ಮ ಕಡೆ ತಿರುಗಿ 'ದೊಡ್ಡ ಮನುಷ್ಯ. ಇಂತಹ ಕಷ್ಟ ಗಂಧರ್ವರಂತಹ ಮಹನೀಯನಿಗೆ ಬರಬಾರದು ಸ್ವಾಮಿ' ಎಂದರು. ತಮ್ಮ ಅತ್ಯುನ್ನತ ಸ್ಥಿತಿಯಲ್ಲಿಯೂ ಹಿಂದಿನ ಕಷ್ಟಗಳನ್ನು ಮರೆಯದಿರುವುದು ಹೆಚ್ಚಿನ ಗುಣ.

ವೀರಣ್ಣನವರ ಬಗ್ಗೆ ನನಗೆ ಆಶ್ಚರ್ಯವನ್ನುಂಟುಮಾಡಿರುವ ವಿಷಯಗಳು ಕೆಲವಿವೆ. ಅವರಿಗೆ ಪುಸ್ತಕ ಓದುವ ಚಟ ಬಹಳ. ಓದಿದ ಪುಸ್ತಕಗಳ ಕೆಲವನ್ನು ನನ್ನೊಂದಿಗೆ ಚರ್ಚಿಸಿದ್ದಾರೆ. ಚರ್ಚೆಯಲ್ಲಿ ಅವರು ತೋರುವ ಜಾಣತನ ಪಂಡಿತರನ್ನು ನಾಚಿಸುತ್ತದೆ. ಅವರ ಪಲ್ಲವಿ 'ನಾನೇನು ಸ್ವಾಮಿ ನಾಟಕದೋನು—ವಿದ್ಯಾವಂತನಲ್ಲ, ಅಜ್ಞ' ನಿಜವೇ ಎಂದು ನಾನು ಹಲವು ಸಲ ಆಶ್ಚರ್ಯಪಟ್ಟಿದ್ದೇನೆ.

ವೀರಣ್ಣನವರು ಶತಾವಧಾನ—ಅಷ್ಟಾವಧಾನಗಳನ್ನು ಕಲಿತಿಲ್ಲ—ಆದರೆ ಮಾಡಬಲ್ಲರು. ಅವರ ನಾಟಕ ನಡೆದಿರುತ್ತದೆ. ಬರುವವರು ಬರುತ್ತಿರುತ್ತಾರೆ—ಹೋಗುವವರು ಹೋಗುತ್ತಿರುತ್ತಾರೆ. ಎಲ್ಲರ ಕೈಯಲ್ಲೂ ವೀರಣ್ಣನವರು ಮಾತನಾಡುತ್ತಿರುತ್ತಾರೆ. ಪಾತ್ರದ ವೇಳೆ ಬಂತೆಂದರೆ ರಂಗವೇದಿಕೆಗೆ ಧಾವಿಸುತ್ತಾರೆ. ಪಾತ್ರ ಮುಗಿಸಿ ಮತ್ತೆ ಬಂದು ಸಂಭಾಷಣೆಯಲ್ಲಿ ಬೆರೆಯುತ್ತಾರೆ.

ಎಂಥೆಂಥ ಸಂದರ್ಭ, ಸನ್ನಿವೇಶ ಬಂದರೂ ವೀರಣ್ಣನವರು ಧೃತಿಗೆಡುವುದಿಲ್ಲ. ನಿರ್ಧಾರ ಅಚಲ. ಒಮ್ಮೆ ಒಂದು ನಿರ್ಧಾರಕ್ಕೆ ಬಂದ

ಕೆಂದರೆ ಯಾರು ಏನು ಹೇಳಿದರೂ ಬದಲಾಯಿಸುವುದಿಲ್ಲ. ಎಲ್ಲರ ಮಾತಿಗೂ ಕಿವಿಗೊಡುತ್ತಾರೆ—ಆದರೆ ತಮಗೆ ಸೂಕ್ತ ತೋರಿದುದನ್ನೇ ಮಾಡುತ್ತಾರೆ. ಯಾರ ಮನಸ್ಸನ್ನೂ ನೋಯಿಸಲಿಚ್ಛಿಸುವುದಿಲ್ಲ. ಎಲ್ಲರನ್ನೂ ಮೆಚ್ಚಿಸ ಲೆತ್ನಿಸುತ್ತಾರೆ. ಇದರಿಂದ ಹಲವು ವೇಳೆ ಯಾರನ್ನೂ ಮೆಚ್ಚಿಸದೆ ಹೋಗು ವುದೂ ಉಂಟು.

ವೀರಣ್ಣನವರು ೪೫—೪೬ ವರ್ಷಕಾಲ ರಂಗಭೂಮಿಯ ಸೇವೆ ಮಾಡಿದ್ದಾರೆ. ಹಲವು ಪಾತ್ರಗಳನ್ನಭಿನಯಿಸಿದ್ದಾರೆ. ಕೆಲವು ಸಲ ಗಂಭೀರ ಪಾತ್ರಗಳಿಗೆ ಕೈಹಾಕಿದುದೂ ಉಂಟು. ಕುರುಕ್ಷೇತ್ರ ನಾಟಕದಲ್ಲಿ ದುರ್ಯೋಧನ ಪಾತ್ರವನ್ನು ಒಂದೆರಡು ಸಲ ಅಭಿನಯಿಸಿದರು. ಆದರೆ ಅಂತಹ ಪಾತ್ರಗಳು ತಮಗಲ್ಲವೆಂದರಿತು ಅವುಗಳನ್ನು ಬಿಟ್ಟರು. ಈ ಯುಕ್ತಾಯುಕ್ತಜ್ಞಾನ, ವಿಮರ್ಶೆಗೆ ಮನಸ್ಸುಗೊಟ್ಟು ತಮ್ಮ ಓರೆಕೋರೆ ಗಳನ್ನು ತಿದ್ದಿಕೊಳ್ಳುವ ಮನೋಭಾವ ವೀರಣ್ಣನವರ ಶ್ರೇಯಸ್ಸಿಗೆ ಬಹು ಮಟ್ಟಿಗೆ ಕಾರಣಗಳಾಗಿವೆ.

ಅಭಿನಯದಲ್ಲಿ ಹಾಸ್ಯರಸಾಭಿನಯ ಬಹಳ ಸುಲಭವೆಂದೂ, ಕಡಿಮೆ ವರ್ಗದ್ದೆಂದೂ ಕೆಲವರು ತಪ್ಪು ಅಭಿಪ್ರಾಯ ತಳೆದಿದ್ದಾರೆ. ಉದಾತ್ತ ನಾಯಕನ ಪಾತ್ರ ಅಭಿನಯಿಸಬಹುದು—ಆದರೆ ಸಾಮಾನ್ಯ ಜೀವಿಯ ಪಾತ್ರ ಅಭಿನಯಿಸುವುದು ತುಂಬ ಕಷ್ಟ. ಹಾಸ್ಯಾಭಿನಯಕಾರ ಅಪಾರ ಅನುಭವಿಯಾಗಿರಬೇಕು. ಲೋಕದ ನಡತೆಯನ್ನು ಚೆನ್ನಾಗಿ ಬಲ್ಲವನಾ ಗಿರಬೇಕು. ಅವುಗಳಿಗೆ ಹಾಸ್ಯದ ಕುಂದಣವಿಟ್ಟು ಕಾಣಿಸಬಲ್ಲ ಕುಶಲ ಶಿಲ್ಪಿಯಾಗಿರಬೇಕು. ಸದಾರಮೆ ನಾಟಕದಲ್ಲಿ ವೈಶ್ಯನ ಪಾತ್ರ ವಹಿಸು ತ್ತಾರೆ ವೀರಣ್ಣನವರು. ವೈಶ್ಯನೊಬ್ಬನ ಭೀರು ಸ್ವಭಾವ, ದುರಾಸೆ, ಅಸತ್ಯ ಪ್ರಿಯತೆಯನ್ನು ವೀರಣ್ಣನವರ ಹಾಗೆ ಯಾರೂ ಅಭಿನಯಿಸಲಾರರು. ಸದಾರಮೆಯಲ್ಲಿ ಸಿಂಹಾಸನ ದೊರಕಿಸಿಕೊಂಡ ಆದಿಮೂರ್ತಿ, ಅದರ ಮೇಲೆ ಹತ್ತಿ ಕೂಡುತ್ತಾನೆ. ಅರಸನಂತಲ್ಲ—ವೈಶ್ಯನಂತೆ. ಕುಕ್ಕರುಗಾಲಿನಲ್ಲಿ ಕುಳಿತು, ಕತ್ತಿಯನ್ನು ತಕ್ಕಡಿಯಂತೆ ಹಿಡಿಯುತ್ತಾನೆ. ಈ ದೃಶ್ಯವೇ ಸಾಕು ವೀರಣ್ಣನವರ ಸಮಾಜದರ್ಶನಕ್ಕೆ ದೃಷ್ಟಾಂತ. ಸ್ವಾಮಿನಿಷ್ಠೆಯಲ್ಲಿ ಇವರು ಅಭಿನಯಿಸುವ ಮುಸಲ್ಮಾನ ಪಾತ್ರದ ಅಭಿನಯ ಉಚ್ಚ ದರ್ಜೆಗೆ

ಸೇರಿದ್ದು. ಬೇರೆ ಸಂಸ್ಕೃತಿಗೆ ಸೇರಿದ ಒಬ್ಬ ವ್ಯಕ್ತಿಯ ಸ್ವಭಾವ ನಿರೀಕ್ಷಣೆಯನ್ನು ಅತ್ಯಂತ ಸೂಕ್ಷ್ಮವಾಗಿ ವೀರಣ್ಣನವರು ಕಾಣಿಸುತ್ತಾರೆ. ಇವರ ಪ್ರಭಾಮಣಿ ನಾಟಕದ ವಿರೋಚನ ಅರೆಹುಚ್ಚ. ಮೃಚ್ಛಕಟಿಕದ 'ಶಕಾರ' ನಂತೆ. ಒಮ್ಮೊಮ್ಮೆ ವಿರೋಚನ ಕಡುಜಾಣನಂತೆ ನುಡಿಯುತ್ತಾನೆ, ಒಮ್ಮೊಮ್ಮೆ ತನ್ನ ನಿಜಗುಣವನ್ನು ಬಯಲಿಗಿಡುತ್ತಾನೆ. ಈ ದ್ವಂದ್ವವನ್ನು ವೀರಣ್ಣನವರು ಬಹಳ ರಸವತ್ತಾಗಿ ಚಿತ್ರಿಸುತ್ತಾರೆ. ಸದಾರಮೆ ನಾಟಕದ 'ಕಳ್ಳ'ನ ಪಾತ್ರವಂತೂ ವೀರಣ್ಣನವರ ಖಾಸಾಪಾತ್ರ. ಈ ಪಾತ್ರವನ್ನೊಮ್ಮೆ ವಿಮರ್ಶಿಸುತ್ತಾ 'ಕಳ್ಳನ ಪಾತ್ರದಲ್ಲಿ ವೀರಣ್ಣನವರು ನಿರೂಪಿಸುವ ಹಾಸ್ಯ ಬಹಳ ಕೀಳು ವರ್ಗದ್ದು. ತನ್ನ ಮತ್ತು ಸದಾರಮೆಯ ಮಧುರ ಮೈತ್ರಿಯನ್ನು ವರ್ಣಿಸುತ್ತಾ ಕಳ್ಳ 'ಬೀಡಿ ಬೆಂಕಿ ಪೊಟ್ಟಣ ಇದ್ದ ಹಾಗೆ ಇದ್ದೆವಲ್ಲೇ—ಇಡ್ಲಿ ಚಟ್ನಿ ಇದ್ದ ಹಾಗೆ ಇದ್ದೆವಲ್ಲೇ' ಮೊದಲಾದ ಹೀನ ಉಪಮೆಗಳನ್ನು ಕೊಡುತ್ತಾನೆ' ಎಂದು ನಾನು ಟೀಕಿಸಿದ್ದೆ. ಕಳ್ಳನ ಪಾತ್ರಕ್ಕೆ ಈ ಟೀಕೆ ಸಲ್ಲದು. ಕುಮತಿಯೂ, ಕುಸಂಸ್ಕೃತನೂ, ರೂಕ್ಷನೂ ಆದ ಕಳ್ಳ ಇಂತಹ ಉಪಮೆಗಳನ್ನಲ್ಲದೆ 'ನಾವು ವಸಂತ, ಕೋಕಿಲ ಇದ್ದ ಹಾಗೆ ಇದ್ದೆವಲ್ಲೆ' ಎಂದು ಹೇಳಲಾರ. ವೀರಣ್ಣನವರ ನಿರೂಪಣೆ ಕಳ್ಳನ ಪಾತ್ರದ ಸ್ವಭಾವಾನುಗುಣವಾಗಿ ಸಮಯೋಚಿತವಾಗಿದೆಯೆಂದು ನನ್ನ ಪುನರ್ವಿವೇಚಿತ ಅಭಿಪ್ರಾಯ.

ಸಂಸ್ಕೃತ ಹಾಸ್ಯಗಾರರೊಬ್ಬರು ವೇಶ್ಯಾಗೃಹದ ಮಧ್ಯಸ್ಥಗಾರನ ಪಾತ್ರವಹಿಸಿ ಅಭಿನಯಿಸುವುದನ್ನು ನಾನು ಕಂಡಿದ್ದೇನೆ. ಅದನ್ನು 'ವೀರಣ್ಣನವರು' 'ಗುಲೇಬಕಾವಲಿ' ನಾಟಕದಲ್ಲಿ ವಹಿಸುವ ಅದೇ ಬಗೆಯ ಪಾತ್ರಕ್ಕೆ ಹೋಲಿಸಿನೋಡಬೇಕು. ಅಂತಹ ಕಠಿಣ ಪಾತ್ರವನ್ನೂ ಅಶ್ಲೀಲಮಯ ಮಾಡದೆ ಹಿತವಾಗಿ ಮಿತವಾಗಿ ವೀರಣ್ಣನವರು ಅಭಿನಯಿಸುತ್ತಾರೆ.

ವೀರಣ್ಣನವರು ಹಾಸ್ಯ ಪಾತ್ರಗಳಲ್ಲಿ ಕಂಡುಬರುವ ಅನುಭವ ದರ್ಶನ, ಅಂತರಂಗ ವಿವೇಚನೆ, ಸಾಮಾಜಿಕ ಸ್ಥಿತಿಗತಿಗಳ ಲಕ್ಷ್ಯ ಸ್ತೋತ್ರಾರ್ಹವಾದುವಾಗಿವೆ.

ನಮ್ಮ ನಟರನ್ನು ಸಾಮಾನ್ಯವಾಗಿ ವಿಲಾಯಿತಿಯ ನಟರಿಗೆ ಹೋಲಿಸುವುದುಂಟು. ವೀರಣ್ಣನವರನ್ನು 'ಕರ್ನಾಟಕದ ಚಾರ್ಲಿ ಚಾಪ್ಲಿನ್'

ಎಂದು ಕೆಲವರು ಕರೆದಿದ್ದಾರೆ. ಚಾರ್ಲಿ ಶ್ರೇಷ್ಠ ದರ್ಜೆಯ ಹಾಸ್ಯಗಾರ. ಕರುಣಾಮಯ ಹಾಸ್ಯೋತ್ಪಾದನೆಯಲ್ಲಿ ಅವನು ಪರಮಸಿದ್ಧ. ಆದರೆ ವೀರಣ್ಣನವರ ವಿವಿಧತೆ ಅವನಲ್ಲಿಲ್ಲ. ಮಾಣವಕ, ಕಳ್ಳ, ಬ್ರಾಹ್ಮಣ, ಮುಸಲ್ಮಾನ, ವೈಶ್ಯ, ವಿರೋಚನ ಪಾತ್ರಗಳು ಒಂದೊಂದೂ ಒಂದೊಂದು ಬಗೆ, ಸಂಪ್ರದಾಯಕ್ಕೆ ಸೇರಿದವು. ಚಾರ್ಲಿ ಒಬ್ಬ ಹಾದಿಹೋಕನ ಪಾತ್ರದಲ್ಲಿ ತನ್ನೆಲ್ಲ ಸಿದ್ಧಾಂತ, ಅನುಭವಗಳನ್ನಡಗಿಸಿಬಿಡುತ್ತಾನೆ. ಸಮಾಜದ ವಿವಿಧವರ್ಗದ ವ್ಯಕ್ತಿಗಳನ್ನು ಅವನು ಚಿತ್ರಿಸಲಾರ. ಅವನಲ್ಲಿ ವಿಸ್ತಾರವಿಲ್ಲ, ಆಳವಿದೆ. ವೀರಣ್ಣನವರಲ್ಲಿ ಆಳ, ವಿಸ್ತಾರಗಳೆರಡರ ಸಂಗಮವಿದೆ.

ಇಂದು ವೀರಣ್ಣನವರು ಬಯಸುವುದು ಕಾಲದ ಪರಿಸ್ಥಿತಿಗೆ ಹೊಂದಿಕೊಂಡಿರುವ ನಾಟಕಗಳು. ಜನಗಳ ಮನಸ್ಸನ್ನು ಹೊಡೆದೆಬ್ಬಿಸುವಂತಹ ಕಲಾಕೃತಿಗಳನ್ನು. ಬೆಂಗಳೂರಿನಲ್ಲಿ ಶಾಶ್ವತ ನಾಟ್ಯ ಮಂದಿರವನ್ನು ಸ್ಥಾಪಿಸಿ ಹೊಸಹೊಸ ಪ್ರಯೋಗಗಳನ್ನು ಮಾಡಬೇಕೆಂದೂ, ವರ್ಷಕ್ಕೆ ಒಂದೆರಡಾದರೂ ಉತ್ತಮ ಶ್ರೇಣಿಯ ಕನ್ನಡ ಚಿತ್ರಗಳನ್ನು ತಯಾರಿಸಬೇಕೆಂದೂ ನಿಯೋಜಿಸಿಕೊಂಡಿದ್ದಾರೆ.

ವೀರಣ್ಣನವರು ತಮ್ಮ ಕಲಾಭಿಜ್ಞತೆ, ವಿದ್ವತ್ಪ್ರೇಮ, ಕನ್ನಡ ಪ್ರೇಮ, ಔದಾರ್ಯ, ಸುಹೃದಯತೆಯಿಂದ ಕನ್ನಡನಾಡಿನ ವೈಭವವನ್ನು ಬೆಳಗಿಸಿದ್ದಾರೆ. ಕನ್ನಡ ರಂಗಭೂಮಿಯ ಚರಿತ್ರೆ ಅಖಿಲ ಭಾರತದಲ್ಲಿ ಬೆಳಗುವಂತೆ ಮಾಡಿದ್ದಾರೆ. ಇಂತಹ ಮಹನೀಯರು ಕನ್ನಡಕಲಾವಿದರಾಗಿರುವುದೂ, ಕನ್ನಡನಾಡಿನ ಉತ್ಕಟ ಪ್ರೇಮಿಗಳಾಗಿರುವುದೂ ನಮ್ಮ ಭಾಗ್ಯ.

೧೯–೪–೧೯೪೬

———

# ಅನುಬಂಧ

[ ಕಲಾವಿದರ ಬಗ್ಗೆ ಈಚೆಗೆ ತಿಳಿದು ಬಂದ ಸಂಗತಿಗಳನ್ನು ಇಲ್ಲಿ ಸಂಗ್ರಹಿಸ ಲಾಗಿದೆ.]

**ಆಸ್ಥಾನವಿದ್ವಾನ್ ಬಿ. ದೇವೇಂದ್ರಪ್ಪ** (ಪುಟ ೨೮)

ದೇವೇಂದ್ರಪ್ಪನವರು ಏಪ್ರಿಲ್ ತಿಂಗಳು ೧೯೪೮ರಲ್ಲಿ ಮುಂಬಯಿಗೆ ಹೋಗಿ ಅಲ್ಲಿ ಕೆಲವು ಕಛೇರಿಗಳನ್ನು ಮಾಡಿದರು. ಮಾತುಂಗದಲ್ಲಿರುವ ಜೀಜಾಭಾಯ್ ಹಾಲಿನಲ್ಲಿ ನಡೆದ ಕಛೇರಿಗೆ ಪ್ರಸಿದ್ಧ ಗವಯ್‌ಗಳಾದ ಉಸ್ತಾದ್ ಅಮಾನುಲ್ಲಾ ಖಾನಸಾಹೇಬರು ದಯೆಮಾಡಿಸಿದ್ದರು. ಸಾಹೇಬರಿಗೆ ಜ್ವರ. ಸ್ವಲ್ಪ ಹೊತ್ತು ಇದ್ದು ಹೋಗುತ್ತೇನೆಂದು ಹೇಳಿದವರು ಕಛೇರಿ ಮುಗಿಯುವವರೆಗೆ—೪॥ ಗಂಟೆಕಾಲ ಕುಳಿತರು. ಕೀರ್ತಿಶೇಷ ಬಿಡಾರಂ ಕೃಷ್ಣಪ್ಪನವರ ನೆನಪು ತೆಗೆದು, ದೇವೇಂದ್ರಪ್ಪನವರನ್ನು ನೇವರಿಸಿ ತಮ್ಮ ತುಂಬು ಸಂತೋಷವನ್ನು ವ್ಯಕ್ತಮಾಡಿದರು. ಅಂದಿನ ಸಭೆಯಲ್ಲಿದ್ದ ಸಂಗೀತ ವಿದ್ವಾನ್ ಶ್ರೀಕೃಷ್ಣ ಭಾಗವತರು ಕೊನೆಯಲ್ಲಿ ಭಾಷಣ ಮಾಡುತ್ತಾ 'ದೇವೇಂದ್ರಪ್ಪನವರ ಗಾನದಲ್ಲಿ ದಿವಂಗತ ಅನಂತರಾಮ ಭಾಗವತರ ರಾಗಭಾವ, ಗಾಂಭೀರ್ಯಗಳೂ, ದಿವಂಗತ ಬಿಡಾರಂ ಕೃಷ್ಣಪ್ಪನವರ ರಾಜಠೀವಿ, ಕಲ್ಪನಾ ಶಕ್ತಿಗಳೂ ಸಮ್ಮಿಳನವಾಗಿವೆ' ಎಂದು ಹೇಳಿದರು. ಮುಂಬಯಿಯಲ್ಲಿರುವ ಕಾಶೀಮಠದ ಶ್ರೀಶ್ರೀಗಳವರು ದೇವೇಂದ್ರಪ್ಪನವರ ಕಛೇರಿ ಮಾಡಿಸಿ ಸ್ವರ್ಣಪದಕವನ್ನಿತ್ತು ವಿಶೇಷ ಗೌರವ ಸಲ್ಲಿಸಿದರು.

೧೯೪೪, ಫೆಬ್ರುವರಿ ತಿಂಗಳಲ್ಲಿ ಪ್ರೊದತ್ತೂರಿನ ಮಹಾಜನರು ದೇವೇಂದ್ರಪ್ಪನವರನ್ನು ಬರಮಾಡಿಕೊಂಡು ಶ್ರೀಸಮರ್ಥನಾರಾಯಣ ಮಹಾರಾಜರ ಅಧ್ಯಕ್ಷತೆಯಲ್ಲಿ ಸೇರಿದ ಸಭೆಯಲ್ಲಿ 'ಗಾಯಕ ಸಾರ್ವಭೌಮ' ಎಂಬ ಪ್ರಶಸ್ತಿಯನ್ನು ಉಚಿತ ಮರ್ಯಾದೆಗಳೊಡನೆ ಸಲ್ಲಿಸಿದರು.

ಮದರಾಸಿನ 'ತ್ಯಾಗಬ್ರಹ್ಮಸಭಾ' ಎಂಬ ವಿದ್ವತ್ಸಭೆಯಲ್ಲಿ ಜನವರಿ ೪೫ರಲ್ಲಿ ದೇವೇಂದ್ರಪ್ಪನವರ ಕಛೇರಿ. ಅದನ್ನು ವಿಮರ್ಶಿಸುತ್ತಾ ಪ್ರಸಿದ್ಧ ತಮಿಳು ಪತ್ರಿಕೆ 'ಸ್ವದೇಶ ಮಿತ್ರನ್' ಹೀಗೆ ಅಭಿಪ್ರಾಯಪಟ್ಟಿತು.

"ಕೆಲವರಿಗೆ ಪ್ರಶಸ್ತಿಗಳು (Titles) ಇರುತ್ತವೆ—ಆದರೆ ಅವರಿಗೆ ಹಾಡಲು ಬರುವುದಿಲ್ಲ. ಕೆಲವರಿಗೆ ಹಾಡಲು ಬರುತ್ತದೆ, ಪ್ರಶಸ್ತಿಗಳು ಇರುವುದಿಲ್ಲ. ದೇವೇಂದ್ರಪ್ಪನವರಿಗೆ ಎರಡೂ ಇವೆ."

ಕಳೆದ ವರ್ಷ ಡಿಸೆಂಬರ್ ತಿಂಗಳಲ್ಲಿ ಆಳುವ ಮೈಸೂರು ಮಹಾಸ್ವಾಮಿಯವರು ಒಂದೇ ಸಮನಾಗಿ ೯ ದಿವಸ ದೇವೇಂದ್ರಪ್ಪನವರನ್ನು ಬರಮಾಡಿಕೊಂಡು ಅವರ ಬಾಯಿಹಾಡುಗಾರಿಕೆ, ಪಿಟೀಲು, ವೀಣೆ, ಜಲತರಂಗ ವಾದ್ಯವಾದನವನ್ನು ಕೇಳಿ ಸಂತೋಷಪಟ್ಟರು. ಪ್ರತಿದಿವಸ ಮಹಾಸ್ವಾಮಿಯವರು ಹೀಗೆ ೧—೧॥ ಗಂಟೆ ಒಬ್ಬ ವಿದ್ವಾಂಸರಿಗೆ ಕೊಟ್ಟಿದು ಅಪರೂಪ.

ಈಚೆಗೆ ದೇವೇಂದ್ರಪ್ಪನವರು ಪ್ರಬಲ ಬೇನೆಗೆ ತುತ್ತಾಗಿ ಅದರಿಂದ ಪಾರಾಗಿದ್ದಾರೆ. ಕನ್ನಡಿಗರ ಪುಣ್ಯಫಲದಿಂದ ಅವರು ಮೃತ್ಯು ದವಡೆಯಿಂದ ಹೊರ ಬಂದಿದ್ದಾರೆ. ಇದರಿಂದ ಇವರಿಗೆ ಒಳ್ಳಿತೇ ಆಗಿರುವುದು ಪರಮಾಶ್ಚರ್ಯ. ಅವರ ಶಾರೀರ ಈಗ ಅದ್ಭುತವಾಗಿದೆ. ಅದರ ಸಿಂಹವೈಖರಿ ಇಡೀ ದಕ್ಷಿಣ ಹಿಂದೂಸ್ಥಾನದ ಯಾವ ಸಂಗೀತಗಾರರಿಗೂ ಇಲ್ಲವೆಂದು ಧೈರ್ಯವಾಗಿ ಹೇಳಬಹುದು.

ದೇವೇಂದ್ರಪ್ಪನವರು ತಮ್ಮ ವಿದ್ಯಾಬಲದಿಂದ ಕೀರ್ತಿಶೇಷ ಬಿಡಾರಂ ಕೃಷ್ಣಪ್ಪನವರು ಬಿಟ್ಟು ಹೋಗಿರುವ ಸಂಗೀತ ಸಿಂಹಾಸನವನ್ನಡರಿ ಕನ್ನಡನಾಡಿಗೆ ಅಭೂತಪೂರ್ವ ಕೀರ್ತಿ ತರುತ್ತಾರೆಂಬ ಭರವಸೆ ಕಲಾಪ್ರೇಮಿಗಳಿಗಿದೆ.

೨೦-೪-೧೯೪೬

## ವಾದ್ಯವಾದನ ನಿಪುಣ ವಾಸುದೇವ (ಪುಟ ೫೨)

ಚಿರಂಜೀವಿ ವಾಸುದೇವನ ಸಂಗೀತ ಕರ್ನಾಟಕದಲ್ಲಿ ಮತ್ತು ಹೊರಗೆ ವಿಶೇಷವಾಗಿ ಆಗುತ್ತಿದೆ. ಮುಂಬಯಿ, ಪುಣೆ, ಫಲಟನ್ ಮೊದಲಾದ ಊರುಗಳಲ್ಲಿ ಮೇಲಿಂದ ಮೇಲೆ ಅವನ ಸಂಗೀತವಾಗುತ್ತಿರುತ್ತದೆ. ಕೆಲವು ಕಡೆ ಸ್ವಾರಸ್ಯ ಪ್ರಸಂಗಗಳು ನಡೆದಿವೆ.

ಒಮ್ಮೆ ಮುಂಬಯಿಯ ಪ್ರಸಿದ್ಧ ಶಿಲ್ಪಿಗಳಾದ ತಾಲೀಮರಲ್ಲಿ ವಾಸುದೇವನ ಸಂಗೀತ. ಹಾರ್ಮೋನಿಯಂ ವಾದ್ಯವಾದನ ನಿಷ್ಣಾತರಾದ ಕೊರೆಗಾಂವಕರರವರೂ ಆಮಂತ್ರಿತರಾಗಿ ಬಂದಿದ್ದರು. ವಾಸುದೇವನ ಜಾಣ್ಮೆಯನ್ನು ಕಂಡು 'ನಿನಗೇನು ಬೇಕು, ವಾಸುದೇವಾ. ಕೇಳು ಕೊಡುವೆನು' ಎಂದರು. ಅದಕ್ಕೆ ವಾಸುದೇವ 'ನನಗೆ ಏನೂ ಬೇಡ. ನಾನು ನುಡಿಸಿದ

ಪೂರ್ಯಾ ರಾಗವನ್ನೇ ನೀವು ವಿಸ್ತಾರವಾಗಿ ನುಡಿಸಿ ತೋರಿಸಿ' ಎಂದ. ಕೊರೆಗಾಂವಕರವರು ನುಡಿಸಿ ಬಾಲಕಲಾವಿದನನ್ನು ಆನಂದಗೊಳಿಸಿದರು.

ಪಂಡರಾಪುರದಲ್ಲಿ ಶ್ರೀ ಪಂಚವಾಡಕರವರಲ್ಲಿ ವಾಸುದೇವನ ಸಂಗೀತ. ಸಂಗೀತಕ್ಕೆ ಬಂದಿದ್ದ ಗಾಯನಾಚಾರ್ಯ ನಾರಾಯಣರಾವ್ ಥಿಟೆಯವರು ವಾಸುದೇವನಿಗೆ 'ಮಂಜುಷಾರತ್ನ' ಎಂಬ ಪ್ರಶಸ್ತಿಯನ್ನು ಅಲ್ಲಿಯೇ ಕೊಡುತ್ತಾ 'ನನಗೀಗ ಎಪ್ಪತ್ತು ವರ್ಷ. ನಾನು ಇಪ್ಪತ್ತು ವರ್ಷದವ ನಿರುವಾಗಲೇ ಸಂಗೀತ ಆರಂಭಿಸಿದೆ. ನನಗಿನ್ನೂ ವಾಸುದೇವನಿಗೆ ಬಂದಿರು ವಷ್ಟು ಲಯದ ಲೆಖ್ಖ ಬಂದಿಲ್ಲ. ಇವನಿಗೆ ಇದನ್ನು ಭಗವಂತನಲ್ಲದೆ ಇನ್ನು ಯಾರೂ ಹೇಳಿಕೊಟ್ಟಿರಲಾರರು' ಎಂದರು.

ಪಂಡರಾಪುರದಲ್ಲಿ ವಾಸುದೇವ ಹೋಗಿದ್ದಾಗ ಒಂದು ವಿಚಿತ್ರ ಘಟನೆ ನಡೆಯಿತು. ರಖುಮಾಬಾಯಿ ದೇವಸ್ಥಾನದಲ್ಲಿ ವಾಸುದೇವನ ಸಂಗೀತ. ಸಾವಿರಾರು ಜನರ ಗುಜಗುಂಪಲು. ಮತ್ತೊಂದು ಕಡೆ ಸುಪ್ರಸಿದ್ಧ ಗವಯ್ ಗಳಾದ ಜಗನ್ನಾಥ ಬೂವಾ ಪಂಡರಾಪುರಕರ ಇವರ ಗಾಯನ. ಜನಕ್ಕೆ ವಿಶೇಷ ಕುತೂಹಲ. ಒಂದು ಕಡೆ ಅರಿತನುರಿತ ಗಾಯಕ, ಇನ್ನೊಂದು ಕಡೆ ಹಾಲುಹಸುಳೆ ವಾದ್ಯಗಾರ. ಡಾ|| ಘಾರಪುರೆಯವರು ಬಂದು ಜಾಗ್ರತೆ ಯಿಂದ ಬಾರಿಸುವಂತೆ ವಾಸುದೇವನನ್ನೆಚ್ಚರಿಸಲು ಅವನ ತಂದೆಗೆ ತಿಳಿಸಿ ದರು. ವಾಸುದೇವ ಕಣ್ಣುಮುಚ್ಚಿ ರಖುಮಾತಾಯಿಯ ಧ್ಯಾನಾಸಕ್ತ ನಾಗಿದ್ದ. ಧ್ಯಾನಮುಗಿಸು, ಎಂದಿನಂತೆ 'ಆರಂಭಿಸಲೇ' ಎಂದು ಕೇಳಿ ದಾಗ ತಂದೆ ಘಾರಪುರೆಯವರ ಮಾತನ್ನು ಹೇಳಿದರು. ವಾಸುದೇವ ಗಂಭೀರನಾಗಿ, 'ದೇವಿಯ ಮುಂದೆ ಕುಳಿತಿದ್ದೇನೆ. ಅದನ್ನು ಅವರಿಗೆ ತಿಳಿಸು' ಎಂದ. ಯಮನ್‌ರಾಗದ ಸ್ವರ ಕೆಲಸವನ್ನು ತಂದೆ ಆರಂಭಿಸಿ ಎಕ್ಕಾತಾಳದಲ್ಲಿ ತ್ರಿಕಾಲದಲ್ಲಿ ಬಾರಿಸುವಂತೆ ವಾಸುದೇವನಿಗೆ ಹೇಳಿದರು. ವಾಸುದೇವ ಹಾರ್ಮೋನಿಯಂ ಮುಂದೆ ಕುಳಿತು ಒಂದು ಸಲ ತಿದಿಯೊತ್ತಿ ಬಲಗೈ ಬೆರಳನ್ನು ಷಡ್ಜದ ಮೇಲಿಡುವಷ್ಟರಲ್ಲಿ ತಬಲಾದವನು ಒಂದು ಕಠಿಣ ಬೋಲನ್ನು ಬಾರಿಸಿ, ವಾಸುದೇವನನ್ನು ಬೆದರಿಸಲೆತ್ನಿಸಿದ. ವಾಸು ದೇವ ಒಮ್ಮೆ ಸಭೆಯನ್ನು ನೋಡಿ, ತಂದೆಗೆ 'ಪೇಟಿಯವನಿಗೆ ಹೇಳು. ಇವತ್ತು ಪೇಟಿಯ ಕಾರ್ಯಕ್ರಮವೇ ವಿನಾ ತಬಲಾ ಕಾರ್ಯಕ್ರಮವಲ್ಲ.

ತಬಲಾ ಅಂದರೆ ಲಯಸೂಚಕ ವಾದ್ಯ. ನಾನು ಷಡ್ಜಸ್ವರ ಹೊರಡಿಸುವಷ್ಟರಲ್ಲಿಯೇ ತಬಲಾದವನಿಗೆ ಯಾವ ಲಯ ಸಿಕ್ಕಿತು? ಇದು ದೊಡ್ಡ ತಪ್ಪು. ನಾನು ಹೇಳುವವರೆಗೆ ತಬಲಾ ಮೇಲೆ ಕೈಹಾಕಕೂಡದೆಂದು ಹೇಳು' ಎಂದು ಅಧಿಕಾರವಾಣಿಯಿಂದ ನುಡಿದ. ಶಾಸ್ತ್ರ, ಪದ್ಧತಿ ಎರಡೂ ವಾಸುದೇವನ ಬೆಂಬಲಕ್ಕಿದ್ದವು. ತಬಲಾದವನು ವಾಸುದೇವನ ಆಜ್ಞೆಯನ್ನು ನಿರ್ವಾಹವಿಲ್ಲದೆ ಪರಿಪಾಲಿಸಬೇಕಾಯಿತು. ಯಮನ್ ರಾಗವನ್ನೇ ವಾಸುದೇವ ೧॥ ಗಂಟೆ ಬಾರಿಸಿ ಜಯಭೇರಿ ಹೊಡೆದ. ವಾಸುದೇವನ ವಿಜಯ ಕನ್ನಡದ ವಿಜಯ. ಮರಾಟಿ ವಾತಾವರಣ, ಮರಾಟಿ ತಬಲಾದವನು ಈ ವಿಷಮ ಸನ್ನಿವೇಶದಲ್ಲಿ ವಾಸುದೇವ ಕನ್ನಡ ಪ್ರತಿಭೆಯ ಪಂಜನ್ನು ಎತ್ತಿ ಹಿಡಿದ.

೧೯೪೪ ಅಕ್ಟೋಬರ್ ತಿಂಗಳಲ್ಲಿ ಮೈಸೂರು ಅರಮನೆಯಲ್ಲಿ ನುಡಿಸುವ ಅವಕಾಶ ವಾಸುದೇವನಿಗೆ ಸಿಕ್ಕಿತು. ರಾಜಮಾತೆ, ರಾಜಮಹಿಷಿ, ರಾಜಭಗಿನಿಯರು ಅವನ ಸಂಗೀತ ಕೇಳಿ ಸಂತೋಷಿಸಿದರು. ಕಾರ್ಯಕ್ರಮ ಮುಗಿದ ಮೇಲೆ ರಾಜಮಾತೆ 'ಮಗೂ—ನಿನಗೇನು ಬೇಕು' ಎಂದರು. ವಾಸುದೇವ ವಿನಮ್ರತೆಯಿಂದ 'ಮಹಾಸ್ವಾಮಿಯವರ ಎದುರಿಗೆ ನುಡಿಸುವ ಸುಸಂಧಿ ಒದಗಿಸಿಕೊಡಬೇಕು' ಎಂದು ಕೇಳಿಕೊಂಡ. ತಾಯಿಯವರು ಕೂಡಲೆ ಮಹಾಸ್ವಾಮಿಯವರಿಗೆ ಫೋನ್ ಮಾಡಿದರು. ಆದರೆ ಕಾರ್ಯಾವಸರದಲ್ಲಿ ಮಹಾಸ್ವಾಮಿಯವರಿಗೆ ವ್ಯವಧಾನವಿರಲಿಲ್ಲ. ಮತ್ತೊಮ್ಮೆ ಅವಕಾಶ ಕಲ್ಪಿಸಿ ಕೊಡುತ್ತೇವೆಂದು ತಿಳಿಸಿ ರಾಜಮಾತೃಶ್ರೀಯವರು ವಾಸುದೇವನಿಗೆ ಬಂಗಾರದ ಮೆಡಲು, ಜೋಡಿಶಾಲು, ಶಲ್ಯ, ೧೦೦ ರೂಪಾಯಿಗಳನ್ನು ಆಶೀರ್ವದಿಸಿದರು.

ಹೋದೆಡೆಯಲ್ಲಿ ತನ್ನ ಪ್ರತಿಭೆಯನ್ನು ಸಾರಿ, ತನ್ನ ಮಧುರ ಸಂಗೀತದಿಂದ ಚಿರಂಜೀವಿ ವಾಸುದೇವ ಶ್ರಾವಕರ ಮನದಣಿಸುತ್ತಿದ್ದಾನೆ. ಇಂದವನು ಹೆಚ್ಚು ವಿದ್ಯೆ ಬೇಕೆಂದು ಹಾತೊರೆಯುತ್ತಿದ್ದಾನೆ. ತಂದೆಯ ಆರ್ಥಿಕ ಸ್ಥಿತಿಯಲ್ಲಿ ಅದು ಹಗಲುಗನಸು. ಕನ್ನಡನಾಡಿನಲ್ಲಿ ಈ ಬಾಲಸರಸ್ವತಿಯನ್ನು ಎತ್ತಿ ಹಿಡಿದು, ಅವನ ವಿದ್ಯಾವ್ಯಾಸಂಗಕ್ಕೆ ನೆರವಾಗುವ ಪುಣ್ಯವಂತರು ಯಾರೂ ಇಲ್ಲವೇ?

೨೦-೪-೧೯೪೬